# ಅಂಕಣ

ಜನವರಿ 1982

ಪವಾಡಗಳತ್ತ ಪಯಣ
- ಥಿಯೋಡರ್ ರೋಸ್ಜಕ್

ಭಾರತೀಯ ರಾಜಕೀಯ ವ್ಯವಸ್ಥೆ
- ಬಾಪೂ ಹೆದ್ದೂರಶೆಟ್ಟಿ

ಟಿಪ್ಪಣಿಗಳು

ಯಕ್ಷಗಾನ ಮತ್ತು ಶಿವರಾಮ ಕಾರಂತ....ಇತ್ಯಾದಿ
- ಕ. ವೆಂ. ರಾಜಗೋಪಾಲ

೧೦ ಮಾರ್ಚ್ ೧೯೮೨?
- ಎಚ್. ಆರ್. ರಾಮಕೃಷ್ಣರಾವ್

# ಅಂಕಣ

ಜನವರಿ 1982 ಸಂಪುಟ–3 ಸಂಚಿಕೆ–3


೧೯೮೧ ಸಾಲಿನ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಬಹುಮಾನಗಳನ್ನು ಪಡೆದವರೆಲ್ಲರಿಗೆ ಮತ್ತು 'ಜೀವಧ್ವನಿ' ಕವನ ಸಂಕಲನಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯನ್ನು ಪಡೆದ ಶ್ರೀ ಚೆನ್ನವೀರ ಕಣವಿಯವರಿಗೆ 'ಅಂಕಣ'ದ ಅಭಿನಂದನೆಗಳು.

'ಅಂಕಣ' ಇದುವರೆಗೆ ಪ್ರಕಟಿಸಿರುವ ಎಲ್ಲಾ ಸಂಚಿಕೆಗಳನ್ನು ಒಂದು ಗ್ರಂಥರೂಪದಲ್ಲಿ ಬೈಂಡ್ ಮಾಡಿಸಿ ನಮ್ಮ ಓದುಗರಿಗೆ ಮಾರಾಟ ಮಾಡಲಾಗುವುದು. ಇದನ್ನು ಪಡೆಯಲಿಚ್ಛಿಸುವವರು ರೂ. ೪೦/ ನ್ನು ಮುಂಗಡವಾಗಿ 'ಅಂಕಣ'ದ ಹೆಸರಿಗೆ ಕಳುಹಿಸಬೇಕು. ಚಂದಾ ವರ್ಷ ಮುಗಿಯುವುದರೊಳಗೆ ಸಮಗ್ರ ಸಂಪುಟವನ್ನು ಕಳುಹಿಸಲಾಗುವುದು.

'ಅಂಕಣ'ದ ಈ ಸಂಚಿಕೆಯೂ ತಡವಾಗಿ ನಿಮ್ಮ ಕೈ ಸೇರಿದೆ. ಮುಂದಿನ ಸಂಚಿಕೆ ಸಕಾಲದಲ್ಲಿ ಬರುತ್ತದೆ. ದಯವಿಟ್ಟು ಸಹಕರಿಸಿ. ಮೇ ತಿಂಗಳ 'ಅಂಕಣ' ಬೇಂದ್ರೆಯವರ ನೆನಪಿನ ವಿಶೇಷ ಸಂಚಿಕೆಯಾಗಿ ಪ್ರಕಟವಾಗುವುದು.

–ಅಂಕಣ


8, 'ಚಿರಂಜೀವಿ', ಹಳೇ ಈಜುಕೊಳದ ರಸ್ತೆ, ಕೋದಂಡರಾಮಪುರ, ಬೆಂಗಳೂರು–560 003


## ಈ ಸಂಚಿಕೆಯಲ್ಲಿ

### ಲೇಖನಗಳು


ಪವಾಡಗಳತ್ತ ಪಯಣ / 1 / ಥಿಯೋಡರ್ ರೊಸ್ಜಕ್
ಭಾರತೀಯ ರಾಜಕೀಯ ವ್ಯವಸ್ಥೆ : ಒಂದು ಚಿಕಿತ್ಸಕ ದೃಷ್ಟಿ / 9 / ಬಾಪು ಹೆದ್ದೂರಶೆಟ್ಟಿ
ಯಕ್ಷಗಾನ ಮತ್ತು ಶಿವರಾಮ ಕಾರಂತರು / 16 / ಕ. ವೆಂ. ರಾಜಗೋಪಾಲ


### ಟಿಪ್ಪಣಿಗಳು


ಆದೇಶ ಸಂಧಿ / ವ್ಯಂಜನ ಸಂಧಿಯನ್ನು ಕುರಿತು / 22 / ಕ. ನಂ. ನಾಗರಾಜು


### ಪರಿಚಯ


10 ಮಾರ್ಚ್ 1982 ? / 24 / ಎಚ್. ಆರ್. ರಾಮಕೃಷ್ಣರಾವ್



ಪ್ರಕಟನೆ : **'ಪಿ. ಪಿ.' ಬಳಗದ ಗೆಳೆಯರಿಂದ**

ವಾರ್ಷಿಕ ಚಂದಾ : **ಹತ್ತು ರೂಪಾಯಿ**

# ಪವಾಡಗಳತ್ತ ಪಯಣ

○

ಥಿಯೋಡರ್ ರೊಸ್ಜಕ್

ಥಿಯೋಡರ್ ರೊಸ್ಜಕ್ ಅವರ ಪ್ರಬಂಧ ದಿಂದ ಸಂಗ್ರಹದ ವಿಚಾರಗಳು. ಮೂಲ ಪ್ರಬಂಧ 1982ರ ಡಿಸೆಂಬರ್‌ನ SPAN ನಲ್ಲಿದೆ. ಪ್ರಬಂಧ ಬರೆದವರು ಅಮೆರಿಕೆಯ ಪ್ರಾಧ್ಯಾಪಕರು. ಈ ಶತಮಾನದ ಆರು, ಏಳನೆ ದಶಕದಲ್ಲಿ ವಿಜ್ಞಾನದತ್ತ ತರುಣರು ಆಕರ್ಷಿತರಾದರೆ ಕಳೆದ ದಶಕದ ಕೊನೆಕೊನೆಗೆ ತರ್ಕಾತೀತವಾದುದರತ್ತ ಮುಖ ಮಾಡಿದ್ದನ್ನು ಕುರಿತು ಚರ್ಚಿಸಿ ಈ ಲೇಖನವನ್ನು ಬರೆದಿದ್ದಾರೆ. ಅವರ ಚಿಂತನೆಗಳು ಅಷ್ಟಿಷ್ಟು ವ್ಯತ್ಯಾಸದೊಡನೆ ನಮ್ಮ ಪರಿಸರಕ್ಕೆ ಹೊಂದುತ್ತಿರುವಂತೆ ಕಂಡದ್ದರಿಂದ ಇಲ್ಲಿ ಸಂಗ್ರಹಿಸಲಾಗಿದೆ. ಆಸಕ್ತರು ಚರ್ಚೆಯನ್ನು ಬೆಳೆಸಬೇಕೆಂದು ಕೋರುತ್ತೇವೆ.

—ಅಂಕಣ

ಇತ್ತೀಚಿನ ದಿನಗಳಲ್ಲಿ ಪವಾಡಗಳ ಬಗ್ಗೆ, ಪವಾಡ ಪುರುಷರ ಬಗ್ಗೆ ಬುದ್ಧಿವಂತರೂ ತೀವ್ರವಾದ ಆಸಕ್ತಿಯನ್ನು ತೋರಿಸುತ್ತಿರುವುದನ್ನು ನಾವು ಕಾಣುತ್ತಿದ್ದೇವೆ. ಎಲ್ಲಿ ಹೋದರೂ ಸಿದ್ಧಿಗಳನ್ನು ಹೊಂದಿದವರು, ಅತಿಮಾನುಷ ಶಕ್ತಿಗಳಿಗಾಗಿ ಪ್ರಸಿದ್ಧರಾದವರು, ಮೋಕ್ಷಕಾಮಿಗಳು ಕಾಣಸಿಗುತ್ತಿದ್ದಾರೆ ಅಥವಾ ಅಂಥವರಿಗಾಗಿ ಎಲ್ಲೆಲ್ಲೂ ಹುಡುಕಾಟ ನಡೆದಿರುವುದನ್ನು ಕಂಡರೆ ಪುರಸ್ಕಾರವಾದರೂ ಸಿಕ್ಕೀತೀರುವುದು. ಎಲ್ಲೆಲ್ಲಿ ನೋಡಿದರೂ ಜನರು ಸಹಜ ಜೀವನದ ಲಯಗಳನ್ನು ಮುರಿಯುವ ಎಂಥದಾದರೂ ಒಂದು ಶಕ್ತಿಗಾಗಿ ಹುಚ್ಚುಹಿಡಿದವರಂತೆ ಭ್ರಮೆಯಿಂದ ಕಾಯುತ್ತಿದ್ದಾರೆ. ಕಂಡದಕ್ಕೆ ಮುಗಿಬಿದ್ದು ತಮ್ಮನ್ನೆ ಅದಕ್ಕೆ ಅರ್ಪಿಸಿಕೊಳ್ಳುತ್ತಿದ್ದಾರೆ. ತಾವು ನಿರ್ಮಿಸಲಿರುವ ನಾಳಿನ ಸ್ವರ್ಗದ ನಾಡಿಗೆ ಜನರನ್ನು ಕರೆದೊಯ್ಯುವ ಭರವಸೆ ನೀಡುವ ಈ ಶಕ್ತಿಗಳು ಧಾರ್ಮಿಕ, ರಾಜಕೀಯ, ಸಾಮಾಜಿಕ ಹೀಗೆ ಯಾವ ಕ್ಷೇತ್ರದಲ್ಲಾದರೂ ಕಾಣಸಿಕ್ಕಬಹುದು. ಕೆಲವೊಮ್ಮೆ ತತ್ವಗಳ ರೂಪದಲ್ಲಿಯೂ ಅಮೂರ್ತವಾಗಿ ಸುತ್ತುವರಿದಿರಬಹುದು. ಕೈಗಾರಿಕೀಕರಣಗೊಂಡ ನಾಡುಗಳಲ್ಲೂ 'ತರ್ಕಾತೀತ' (Suprarational) ಶಕ್ತಿಗಳ ಕಡೆಗೆ ಆಕರ್ಷಿತವಾಗುವುದನ್ನು ಗುರುತಿಸಲು ಸಾಧ್ಯವಿದೆ. ಶ್ರದ್ಧಾ ಕೇಂದ್ರಗಳಲ್ಲಿ ಈ ಶತಮಾನದ ಮೊದಲ ಅರ್ಧದಲ್ಲಿ ಕಳೆದುಹೋದ ನಂಬಿಕೆಗಳನ್ನು ಮರಳಿ

ಸ್ಥಾಪಿಸಲು ಹಲವು ಯತ್ನಗಳು ನಡೆಯುತ್ತಿವೆ. ಐರೋಪ್ಯ ದೇಶಗಳಲ್ಲಿ ಚರ್ಚು ಮತ್ತು ಜನತೆಯ ನಡುವೆ ತನ್ನ ಕೋಟೆಯನ್ನು ಭದ್ರಪಡಿಸಿಕೊಳ್ಳುತ್ತಿರುವುದಕ್ಕೆ ಪುರಾವೆಗಳಿವೆ.

ಇದರ ಜೊತೆಗೆ ಅದ್ಭುತಗಳತ್ತ ಎಲ್ಲರೂ ಆಸೆಗಣ್ಣಿಂದ ನೋಡುವವರೇ ಸರಿ. ಹಾರಾಡುವ ತಟ್ಟೆಗಳು, ವ್ಯೋಮದೊಳಗಿನ ಯಾವುದೋ ಗ್ರಹದಲ್ಲಿನ ಜೀವಿಗಳ ಸಂದೇಶಗಳತ್ತ ತಮ್ಮ ಗಮನವನ್ನು ಕೇಂದ್ರೀಕರಿಸುತ್ತಿದ್ದಾರೆ. ಪೌರಸ್ತ್ಯ ದೇಶಗಳ ಪ್ರಾಚೀನ ಧರ್ಮಗಳ ನಿಗೂಢ ಆಚರಣೆಗಳು ಮಧ್ಯೆ ಚಲಾವಣೆಗೆ ಬರುತ್ತಿವೆ. ಏಕಾಂತ ಧ್ಯಾನ, ಮೌನ, ಸಾಧನೆ, ಯೋಗ, ಸಮಾಧಿ, ಹೀಗೆ ಇನ್ನೆಷ್ಟೋ ಸಂಗತಿಗಳು ಜನರ ಮನ್ನಣೆಯನ್ನು ಪಡೆಯುತ್ತಿವೆ. ವಾಮಾಚಾರ ವಾಸ್ತವವಾಗಿ ಬಳಕೆಯಾಗದಿದ್ದರೂ, ಅದರಲ್ಲಿನ ನಂಬಿಕೆಯನ್ನು ಗಾಢಗೊಳಿಸುವ ಯತ್ನಗಳು ಸಮೂಹ ಮಾಧ್ಯಮಗಳಲ್ಲಿ, ಬರಹಗಳಲ್ಲಿ ಕಂಡುಬರುತ್ತಿದೆ. ಗುರುಗಳು ಜನರನ್ನು ಅವರಿರುವ ಸ್ಥಿತಿಯಿಂದ ಮೇಲೆತ್ತಿ 'ಸ್ವರ್ಗ'ಕ್ಕೆ ಒಯ್ಯಲು ಕಂಕಣಬದ್ಧರಾಗಿ ನಿಂತಿದ್ದಾರೆ.

ಜನ ಸಾಮಾನ್ಯರು ಎಂದೂ ಇಂಥ ಸಂಗತಿಗಳ ತಮ್ಮ ಆಸಕ್ತಿಗಳನ್ನು ಪ್ರಕಟಿಸುತ್ತಲೇ ಬಂದಿದ್ದಾರೆಂದೂ, ಅವರಲ್ಲಿನ ಕುತೂಹಲ ಅದಮ್ಯ ಹಾಗೂ ತಣಿಯಲಾಗದುದೆಂದೂ ನಾವು ಒಮ್ಮೆಗೆ ನಿರ್ಣಯಿಸಲು ಸಾಧ್ಯ. ಆದರೆ ಈಚಿನ ದಿನಗಳಲ್ಲಿ ಕೈಗಾರಿಕೀಕರಣಗೊಂಡ ಸಾಮಾಜಿಕ ವಲಯಗಳಲ್ಲಿ ಮಾತ್ರವಲ್ಲ, ಅತ್ಯುನ್ನತ ಶಿಕ್ಷಣವನ್ನು ಪಡೆದ ಬುದ್ಧಿಜೀವಿಗಳಲ್ಲೂ ಕೂಡ ಈ ಅಸಕ್ತಿಗಳು ಕಂಡುಬರತೊಡಗಿವೆ. ಜೆನ್, ಟಿಬೆಟಿಯನ್ ಬೌದ್ಧಧರ್ಮ, ಸ್ವಾಮಿ ಮುಕ್ತಾನಂದ, ಭಗವಾನ್ ರಜನೀಶ್, ಲಾಮಾ, ಜ್ಯೋಗಮ್ ತ್ರುಂಗ್‌ಪಾ, ಸಾಯಿಬಾಬಾ ಹೀಗೆ ಎಷ್ಟು ಜನರೋ! ಇವರೆಲ್ಲ ಬೆನ್ನು ಹತ್ತಿದವರು ಕೇವಲ ಏನೂ ಅರಿಯದ ಮುಗ್ಧರಲ್ಲ; ಬಲ್ಲವರು; ಶಿಕ್ಷಿತರು, ಬುದ್ಧಿವಂತರು. ಅನೇಕ 'ಶಕ್ತಿ'ಗಳ ಬಗ್ಗೆ ತೀವ್ರವಾದ 'ವೈಜ್ಞಾನಿಕ' ಅಧ್ಯಯನ ನಡೆಸುವ ಹಲವು ಸಂಸ್ಥೆಗಳಿವೆ; ಕೋಟ್ಯಂತರ ರೂಪಾಯಿ ಅದರ ಮೇಲೆ ವ್ಯಯವಾಗುತ್ತಿದೆ. ಎಷ್ಟೋ ಜನ, ಮನೋವಿಜ್ಞಾನ, ಜೀವವಿಜ್ಞಾನ, ವೈದ್ಯಕೀಯಶಾಸ್ತ್ರ, ಭೌತವಿಜ್ಞಾನ ಹೀಗೆ ಎಷ್ಟೇ ವಲಯಗಳ ತಜ್ಞರು ತಮ್ಮ ಈ ಪ್ರಯೋಗಾಲಯಗಳ ಅನುಭವಗಳನ್ನು ಹಂಚಿಕೊಳ್ಳಲು ಸಿದ್ಧರಿದ್ದಾರೆ. ಅವರೆಲ್ಲರ ಗಮನ ಒಂದೇ. ಮಾನವನ ತರ್ಕಕ್ಕೆ ನಿಲುಕದ ಮನಸ್ಸಿನ ವಿವಿಧ ಶಕ್ತಿಗಳನ್ನೂ, ಅನೇಕವಲಯದ ಶಕ್ತಿಗಳನ್ನು ಗ್ರಹಿಸುವುದು; ಇವರೆಲ್ಲರ ಯತ್ನಗಳ ಬಗ್ಗೆ ನಾವೇನು ಸಂದೇಹಗಳನ್ನು ಹೇಳಬಹುದೋ ಅವೆಲ್ಲವನ್ನೂ ಇವರು ತಮ್ಮ ಜೀವನದ ಹಿಂದಿನ ಹಂತಗಳಲ್ಲಿ ಹೊಂದಿದ್ದರೆಂಬುದು ನಿಜ. ಅವೆಲ್ಲವನ್ನೂ ದಾಟಿ, ನಂಬುವ ಶ್ರದ್ಧೆಯನ್ನು ರೂಢಿಸಿಕೊಳ್ಳುವ ಹಂತಕ್ಕೆ ಬಂದಿದ್ದಾರೆ. ಏಕೆ ಹೀಗಾಯಿತು ಎಂಬ ಪ್ರಶ್ನೆ ನಮ್ಮನ್ನು ಗಾಢವಾಗಿ ಕಲಕಬೇಕು.

ತರ್ಕಾತೀತವಾದುದನ್ನು ನಂಬುವುದು, ಬೋಧಿಸುವುದು, ನಂಬಿಸುವುದು ಹೊಸ ವಿಷಯವಲ್ಲ; ಆದರೆ ಈ ದಿನಗಳ ವಿಶೇಷವೆಂದರೆ ಹೀಗೆ ತರ್ಕಾತೀತವಾದುದನ್ನು

ಗಟ್ಟಿಯಾದ 'ವೈಜ್ಞಾನಿಕ' ವಿಧಾನದಲ್ಲಿ ಸಮರ್ಥಿಸುತ್ತಿರುವುದು. ಈ ನಂಬಿಕೆಗಳು ಅವೈಜ್ಞಾನಿಕವೆಂದು ಹೇಳಲಾಗುತ್ತಿಲ್ಲ. ಭೌತಶಾಸ್ತ್ರಜ್ಞರಲ್ಲದ 'ಭೌತಶಾಸ್ತ್ರದ ಓದುಗ ಬುದ್ಧಿಜೀವಿಗಳು' ಈಚಿನ ದಿನಗಳಲ್ಲಿ ರೂಢಿಸಿರುವ ಒಂದು ಸಿದ್ಧಾಂತ ನೋಡಿ ಹೀಗಿದೆ; "ಭೌತಶಾಸ್ತ್ರದ ಸಿದ್ಧಾಂತದ ಬೆಲೆಗಳು ಬೆಳೆಯುತ್ತಿರುವ ದಿಕ್ಕನ್ನು ಗಮನಿಸಿದರೆ ಕಳೆದ ಐದು ದಶಕಗಳಿಂದ ಯಾವುದೇ ಭೌತಶಾಸ್ತ್ರದ ತತ್ತ್ವವನ್ನು ಪ್ರಾಯೋಗಿಕವಾಗಿ ಪರೀಕ್ಷಿಸಿ ನೋಡಲು ಸಾಧ್ಯವಾಗಿಲ್ಲ. ಏಕೆಂದರೆ ಪ್ರಯೋಗದ ವೀಕ್ಷಕನನ್ನು ಪ್ರಯೋಗಕ್ಕೆ ಒಳಪಡಿಸಲಾಗುವ ವ್ಯವಸ್ಥೆಯಿಂದ ಹೊರಗಿಡುವುದು ಸಾಧ್ಯವಾಗುತ್ತಿಲ್ಲ. ಶಕ್ತಿ ಮತ್ತು ವಸ್ತು ಇಲ್ಲವೆ ಕಾಲ ಮತ್ತು ದೇಶ ಇವುಗಳು ಪರಸ್ಪರ ಪರ್ಯಾಯಗಳು ಎಂಬ ತತ್ತ್ವವನ್ನು ಪರೀಕ್ಷಿಸುವುದು ಹೇಗೆ? ಹಾಗೆ ನೋಡಿದರೆ ಈ ತತ್ತ್ವಗಳನ್ನೆ ಉಪನಿಷತ್ತುಗಳೂ ಹೇಳಿದ್ದು...." ಈ ನಿಲುವಿನಲ್ಲಿ ಸಾಧಿತವಾಗುವುದೇನು? ಆಧುನಿಕ ಭೌತಶಾಸ್ತ್ರದಲ್ಲಿ ವಸ್ತುನಿಷ್ಠ ಪರಿವೀಕ್ಷಣೆ ಎಂಬುದು ಇಲ್ಲವೇ ಇಲ್ಲ. ಹಾಗಾಗಿ ಕರ್ಾತೀತವಾದ ಅನುಭವಗಳನ್ನು ಒಪ್ಪಬೇಕು; ಐನ್‌ಸ್ಟೀನ್ 'ಎಲ್ಲವೂ ಸಾಪೇಕ್ಷ' ವೆಂಬ ತತ್ತ್ವಗಳನ್ನು ಮುಂಡಿಸಿದ್ದಾನೆ; ಅನಿರ್ದಿಷ್ಟತೆಯ ಸಿದ್ಧಾಂತವನ್ನು ಒಪ್ಪುವುದಾದರೆ ವ್ಯಕ್ತಿನಿಷ್ಠ ಪರಿವೀಕ್ಷಣೆಯನ್ನು ಒಪ್ಪಬೇಕು; ಮಿದುಳಿನ ಎರಡು ಭಾಗಗಳ ಬಗ್ಗೆ ನಡೆಸಲಾದ ಸಂಶೋಧನೆಗಳಿಂದಾಗಿ ಆದಿ ಭೌತಿಕ ಸಂಗತಿಗಳಲ್ಲಿ ಸತ್ಯ ಕಂಡುಬಂದಿದೆ. ಹೀಗೆ ಇನ್ನಷ್ಟು ಕುತೂಹಲಕಾರಿ ಸಿದ್ಧಾಂತಗಳು ರೂಢವಾಗುತ್ತಿವೆ.

ಈ ಬಗೆಯ 'ಜನಪ್ರಿಯ'ಗೊಳಿಸಿದ ವೈಜ್ಞಾನಿಕ ಬರಹಗಳು ಹೊಸಬಗೆಯ ಮೂಢನಂಬಿಕೆಗಳನ್ನು ರೂಢಿಗೆ ತರುತ್ತವೆ. ಧಾರ್ಮಿಕ ಆಸಕ್ತಿಗಳನ್ನು ಪೂರೈಸಲೆಂದು ವೈಜ್ಞಾನಿಕ ವಿವರಗಳನ್ನು, ವಿಚಾರಗಳನ್ನು ಸಡಿಲಗೊಳಿಸಿ ಬಳಸುತ್ತವೆ. ಕಳೆದ ಮೂರು ಶತಮಾನಗಳಿಂದ ಬೆಳೆದು ಬಂದ 'ವೈಜ್ಞಾನಿಕ ವಾಸ್ತವ'ದ ನೆಲೆಗಟ್ಟು ಈಗೀಗ ಛಿದ್ರವಾಗುತ್ತಿದೆ. ಜನರು ಆದರಲ್ಲೂ ಕೈಗಾರಿಕೀಕರಣಗೊಂಡ ವಲಯದವರು ಆಳದಲ್ಲಿ ಜೀವನವನ್ನು ಗ್ರಹಿಸುವ ಕ್ರಮದಲ್ಲಿ ಬದಲು ತಲೆದೋರತೊಡಗಿದೆ.

ನಮ್ಮ ಸುತ್ತಣ ಪರಿಸರವನ್ನು ಕಂಡಾಗ ಅದು ಚಿಂತನೆಯ ಕ್ರಮದಲ್ಲಿ ಶ್ರೇಣೀಕರಣಕ್ಕೆ ಒಳಗಾಗಿರುವುದನ್ನು ಗಮನಿಸಬಹುದು. ಬುದ್ಧಿಯ ಅತ್ಯುನ್ನತ ಮಟ್ಟವನ್ನು ಸಾಧಿಸಿ ಮೇಲುಸ್ತರವನ್ನು ಆಕ್ರಮಿಸಿದವರು ಧರ್ಮನಿರಪೇಕ್ಷಿ ಮಾನವತಾವಾದಿಗಳು (Secular Humanists). ಇವರು ಸಂದೇಹವಾದಿಗಳು; ಐಂದ್ರಿಯಿಕ ಹಾಗೂ ಪುರಾವೆಗಳನ್ನುಳ್ಳ ತಿಳಿವನ್ನು ಮಾತ್ರ ನಂಬುವವರು. ಇವರ ಒಳಬಗೆಗಳೇನೇ ಇರಲಿ ಒಟ್ಟಾರೆಯಾಗಿ ಧಾರ್ಮಿಕ ಅನುಭವವನ್ನು ತರ್ಕಬದ್ಧವಾದುದೆಂದಾಗಲೀ, ಅತೀಂದ್ರಿಯ ಅಪೇಕ್ಷೆಗಳನ್ನು ನೈತಿಕವೆಂದಾಗಲೀ ನಂಬುವುದಿಲ್ಲ. ಈ ಅಲ್ಪಸಂಖ್ಯಾತ ಉನ್ನತ ವರ್ಗದವರ ಸುತ್ತ ದೂರದಲ್ಲಿ ಅಸಂಖ್ಯಾತ ಜನಸಮುದಾಯವಿದೆ. ದೈನಿಕಗಳಲ್ಲಿ ಕಲ್ಪಕತೆ, ಪವಾಡ, ಗೂಢತೆ, ಸ್ವಂತಪರೋಕ್ಷ ಮುಂತಾದವುಗಳಲ್ಲಿ ತಲ್ಲೀನರಾದ ಜನರಿವರು. ಈ ಪರಿಸ್ಥಿತಿಯಲ್ಲಿ ಇತ್ತೀಚಿನ ಬದಲಾವಣೆ ಎಂದರೆ ಅಲ್ಪಸಂಖ್ಯಾತ

ಸ್ತರದ ಎಷ್ಟೋ ಚಿಂತಕರು, ಕಲಾವಿದರು, ಬುದ್ಧಿಜೀವಿಗಳು ಪರ್ಯಾಯ ಧಾರ್ಶನಿಕರನ್ನು, ಪವಾಡಿಗಳನ್ನು ಹುಡುಕುತ್ತಾ ಹೊರಟಿದ್ದಾರೆ. ಲೌಕಿಕ ಬದುಕಿನ ಲೋಲುಪತೆಗೆ ಎಣೆ ಇಲ್ಲದ ಅವಕಾಶಗಳನ್ನು ತಂದುಕೊಟ್ಟ ಕಾರಣದಿಂದ ಮಾತ್ರ ಇನ್ನೂ ವೈಜ್ಞಾನಿಕ ಪ್ರಗತಿಗೆ ಜೋತುಬೀಳಲಾಗಿದೆ. ಉಳಿದಂತೆ ಒಲವು ಇನ್ನೊಂದು ಕಡೆಗೆ ಹರಿದಿದೆಯಷ್ಟೆ.

**ಹೀಗೇಕೆ?** ಒಂದು ಕಾರಣ: ಧರ್ಮನಿರಪೇಕ್ಷ ಮಾನವತಾವಾದದ ಮಿತಿ ಮೀರಿಯ ಗುಣ. ಮನುಷ್ಯ ಆದಿಮ ಕಾಲದಿಂದಲೂ ತರ್ಕಗಮ್ಯವಲ್ಲದನ್ನು ನಂಬುವ ಅದರಲ್ಲಿ ಶ್ರದ್ಧೆಯನ್ನು ಬೆಳೆಸಿಕೊಳ್ಳುವ ಪ್ರವೃತ್ತಿಯನ್ನು ಹೊಂದಿದ್ದಾನೆ. ವೈಜ್ಞಾನಿಕ ಪ್ರಗತಿಯು ಈ ಪ್ರವೃತ್ತಿಯನ್ನು ಪೂರ್ಣವಾಗಿ ನಿಷ್ಕ್ರಿಯಗೊಳಿಸಿಲ್ಲ. ವೈಜ್ಞಾನಿಕ ಚಿಂತನೆಗೆ ತಮ್ಮನ್ನು ಒಪ್ಪಿಸಿಕೊಂಡವರು ಈ ಆದಿಮ ಪ್ರವೃತ್ತಿಗೆ ಮೊರೆ ಹೋಗುತ್ತಿದ್ದಾರೆ. ಜನರಲ್ಲಿ ಈ ಆದಿಮ ಪ್ರವೃತ್ತಿ ಅಡಗದೇ ಇರುವುದಕ್ಕೆ ಮಾನವತಾವಾದದ ವೈಫಲ್ಯಗಳೇ ಕಾರಣವೆನ್ನಬಹುದು. ಸಮಕಾಲೀನ ಸಂದರ್ಭದಲ್ಲಿ ಈ ಮಾನವತಾವಾದ ತಂದುಕೊಟ್ಟಿರುವ ಜೀವನ ಘನತೆಯನ್ನು ಮರೆಯದೇ ಅದರಿಂದ ಉಂಟಾಗಿರುವ ಇತರ ಪರಿಣಾಮಗಳನ್ನು ಗಮನಿಸಬೇಕು.

ಮನುಷ್ಯನಲ್ಲೇ ಈ ಅತೀಂದ್ರಿಯ ಹಾಗೂ ತರ್ಕಾತೀತವಾದುದರ ಕಡೆಗೆ ಇರುವ ತುಯ್ತವನ್ನು ಅವನ ಅವಶ್ಯಕತೆಗಳಲ್ಲಿ ಒಂದೆಂದು ಸಾಮಾನ್ಯವಾಗಿ ಭಾವಿಸಲಾಗಿದೆ. ಇದು ಅವನ ಸೃಜನಾತ್ಮಕ ಹಾಗೂ ನೈತಿಕ ಶಕ್ತಿಗಳ ಹಿಂದಿನ ಪ್ರೇರಣೆಗಳಲ್ಲಿ ಒಂದೆಂದೂ ಸಹ ತಿಳಿಯಲಾಗಿದೆ. ಮಾನವತಾವಾದವು ಯುರೋಪಿನ ಜನದೂರ ಮತೀಯ ವ್ಯವಸ್ಥೆಯ ವಿರುದ್ಧ ದನಿಎತ್ತುವ ಭರದಲ್ಲಿ ಇನ್ನೊಂದು ಅತಿರೇಕಕ್ಕೆ ಹೋಗಿ, ಮನುಷ್ಯನ ಈ ಅವಶ್ಯಕತೆಯನ್ನು ದಮನಗೊಳಿಸಬೇಕೆನ್ನುವ ನಿಲುವನ್ನು ತಳೆದಿದೆ.

ವಾಸ್ತವವನ್ನು ಮೀರಬೇಕೆನ್ನುವ ಮನುಷ್ಯನಲ್ಲಿರುವ ಸಾಮಾನ್ಯ ಬಯಕೆಗೆ ತಕ್ಕ ಮಾರ್ಗದರ್ಶನವಿಲ್ಲದಂತಾಗಿದೆ, ದಿಕ್ಕುಗೆಟ್ಟು ತೋಚಿದ ಹಾದಿಗಳತ್ತ ಅಡ್ಡಾಡುವಂತಾಗಿದೆ. ರೋಚಕವಾದುದೆಲ್ಲವನ್ನೂ ಆಧ್ಯಾತ್ಮವೆಂದೂ ಭಾವಿಸುವುದು, ಅಸ್ಪಷ್ಟವಾದುದೆಲ್ಲ ಗಹನವಾದುದೆಂದು ತಿಳಿಯುವುದು ನಡೆದಿದೆ. ಚಿತ್ತ ವೈಕಲ್ಯದ ತಿಪ್ಪರಲಾಗಗಳನ್ನು ಅಂತರ್ಬೋಧೆ ಎಂದು ವಾದಿಸಲಾಗುತ್ತಿದೆ. ಮರೆತುಹೋದ ಧರ್ಮಗಳು ಪುನರುತ್ಥಾನಗೊಳ್ಳುತ್ತಿವೆ. ಅಸಹನೆ ತುಂಬಿದ ಪ್ರತಿಗಾಮಿ ಧೋರಣೆಯ ಕಣ್ಕಟ್ಟಿನ ಹಾದಿಯತ್ತ ಹೆಜ್ಜೆ ಇಡುವುದು ಇಂದು ಸುಲಭದ ಮಾರ್ಗವಾಗಿದೆ. ದಮನಗೊಂಡ ಈ ಬಯಕೆಯು ಎಲ್ಲ ಬೌದ್ಧಿಕ ಹಾಗೂ ನೈತಿಕ ವಿವೇಕಗಳನ್ನು ಕಳೆದುಕೊಂಡು ಕತ್ತಲಿನ ಕೂಪಕ್ಕೆ ಬಿದ್ದು ವಿನಾಶಕಾರಿಯಾದ ಹಂತವನ್ನು ತಲುಪುತ್ತದೆ.

ಧರ್ಮನಿರಪೇಕ್ಷ ಮಾನವತಾವಾದಿಗಳು, ಹೀಗೆ ತೋಚಿದ ಹಾದಿ ಹಿಡಿದು

ಹೊರಟವರನ್ನು ಟೀಕಿಸುವುದನ್ನು ಮುಂದುವರಿಸುವರು. ತೊಟ್ಟಿಯಲ್ಲಿ ಸಿಕ್ಕದ್ದನ್ನು ತಿನ್ನುವವನಿಗೆ, ಒಳ್ಳೆಯ ಆಹಾರ ಕೊಡುವ ಬದಲು, ಹಾಗೆ ತಿನ್ನುವುದನ್ನೂ ಟೀಕಿಸ ದಂತಾಗಿದೆ. ಈ ಟೀಕೆಯಷ್ಟೇ ಸಾಲದು. ಮನುಷ್ಯನ ಈ ಚಿತ್ತದ ಓಟ ಎತ್ತ ಸಾಗುವುದೋ ಬಲ್ಲವರಾರು? ವಿಲಿಯಂ ಬ್ಲೇಕನು ಹೇಳಿದ್ದು ಇದೇ ತಾನೆ. "ಮನುಷ್ಯನಿಗೆ ಯಾವುದಾದರೊಂದು ಧರ್ಮ ಬೇಕೇಬೇಕು. ಅದು ಸೈತಾನನ ಧರ್ಮ ವಾದರೂ ಸರಿ."

ಮನುಷ್ಯನ ಈ ವರ್ತನೆಗಳ ಹಿಂದಿರುವ ಪ್ರೇರಣೆಗಳ ಬಗ್ಗೆ ವಿವೇಚಿಸುತ್ತಾ ಪರಸ್ಪರ ವಿರುದ್ಧವಾದ ಸಂಗತಿಗಳನ್ನು ಕಲ್ಪಿಸಿಕೊಂಡು ಅವುಗಳಲ್ಲಿ ಯಾವುದು ಸರಿ, ಯಾವುದು ತಪ್ಪು ಎಂದು ವಾದಿಸುತ್ತಾ ಕೂಡುವುದರಲ್ಲಿ ಅರ್ಥವಿಲ್ಲ. ಸಮಸ್ಯೆ ಇರು ವುದು ಈ ಅಂತರ್ವಿಸಂಗತಿಯಲ್ಲಿಯೇ ಸರಿ. ಅದನ್ನು ಒಗ್ಗೂಡಿಸಬೇಕಾದುದೇ ಸಮಸ್ಯೆ.

ಏಕೆ ಈ ಅನನ್ಯಾನುಭವಕ್ಕೆ ತವಕ? ಮನುಷ್ಯರು ತಮ್ಮ ಚಿತ್ತದ ಮಿತಿಗಳನ್ನು ಮುರಿದು ಆದರ ನೆರವನ್ನು ಬಯಸದೇ ನೇರವಾಗಿ ಅತೀತವಾದುದನ್ನು 'ಕಾಣಲು' ಬಯಸುತ್ತಾರೆ. ಇದಕ್ಕಾಗಿ ಹಲವು ಮಾರ್ಗಗಳನ್ನು ಹಿಡಿಯುವುದುಂಟು. ಶ್ರದ್ಧೆ, ಅತೀಂದ್ರಿಯ ಧ್ಯಾನ, ಯೋಗ ಸಮಾಧಿ ಹೀಗೆ ಹಲವು. ನಮ್ಮ ಸುತ್ತಣ ಜಗತ್ತು ಎಲ್ಲ ಅನುಭವಗಳನ್ನು ಶಾಬ್ದಿಕರೂಪಗಳಿಗೆ ಪರಿವರ್ತಿಸುವ ದಿಕ್ಕಿನಲ್ಲಿ ಹೊರಟಿದೆಯಾಗಿ, ಸಹಜವಾಗಿಯೇ ವ್ಯಕ್ತಿಗೆ ಈ ಶಬ್ದ ಚೌಕಟ್ಟಿನ ಮೂಲಕ ಅನುಭವವನ್ನೂ ಪಡೆಯು ವುದು ಸಲ್ಲದೆನಿಸುತ್ತದೆ. ನಿಜವಾದ ಅನುಭವ ಮತ್ತು ಅದನ್ನು ಕುರಿತ ಶಾಬ್ದಿಕ ವಿವರಗಳಲ್ಲಿ, ಇಂದು ಶಾಬ್ದಿಕ ವಿವರಗಳೇ ಗಹನವಾಗತೊಡಗಿವೆಯಾಗಿ ಇಂಥ ಬೌದ್ಧಿಕತೆಯ ವಿರುದ್ಧ ಒಂದು ಪ್ರತಿಕ್ರಿಯೆಯಾಗಿ ಪವಾಡಗಳತ್ತ ಮುಖಮಾಡಿದ್ದಾರೆ. ಒಂದು ತತ್ತ್ವದ ಹಿಂದಿನ ಅನುಭವದ ತಿರುಳು ಕೈಬಿಟ್ಟು, ತತ್ತ್ವವನ್ನು ಕುರಿತ ವಾದ ವಿವಾದಗಳು, ಚರ್ಚೆ ಮುಖ್ಯವಾಗುತ್ತಾ ಹೋಗುವುದರ ಪರಿಣಾಮ ಇದು.

ಅದ್ಭುತಗಳತ್ತ ಮೊಗಮಾಡಿದವರಲ್ಲಿ ನಾವು ಕಾಣುವುದೇನನ್ನು? ಮನಸ್ಸಿನ ಶಕ್ತಿಗಳನ್ನು ನೇರವಾಗಿ ಮೀರುವ ಬಯಕೆಯನ್ನಲ್ಲವೇ? ಎಲ್ಲರಿಗೂ ಸಮಾನವಾದ, ಹೊರಗಿನಿಂದ ಬಂದ 'ದರ್ಶನ'ವನ್ನು ನಿರಾಕರಿಸಿ ಅಸಮಾನ್ಯವಾದುದನ್ನು ತಾನೇ ಅರಿಯಬೇಕೆಂಬ ತವಕ ಈಗ ಮುಖ್ಯವಾಗಿದೆ. ಇದೆಲ್ಲವನ್ನು ಚಾರಿತ್ರಿಕವಾದ ಒಂದು ಸಂಗತಿಯ ಹಿನ್ನೆಲೆಯಲ್ಲಿ ನೋಡಬೇಕು. ಈ ಸಮಾಜ ಅನುಭವದ ಶಾಬ್ದಿಕ ರೂಪ ವನ್ನು ಬೆನ್ನುಹತ್ತಿರುವುದು. ಜನರಿಗೆ ವಾಸ್ತವಕ್ಕಿಂತ, ಅದನ್ನು ಕುರಿತ ವರದಿಗಳು, ವಾದಗಳು, ವಿವಾದಗಳು, ತೀರ್ಮಾನಗಳು, ಪುಸ್ತಕಗಳು, ಚರ್ಚೆಗಳು ಮುಖ್ಯ ವಾಗುತ್ತಿವೆ. ಎಂದರೆ ಸಂಗತಿಗಳ ಮುಖಾಮುಖಿಗಿಂತ ಮಧ್ಯವರ್ತಿ ಹಂತದಲ್ಲಿನ ಆಸಕ್ತಿಗಳು ಬಲವಾಗುತ್ತಿವೆ ತತ್ತ್ವಶಾಸ್ತ್ರಕ್ಕೂ ಇದೇ ಸ್ಥಿತಿ. ತರ್ಕಗಳನ್ನು ಆಧರಿಸಿ ವಾಗ್ವಾದಗಳನ್ನು ಬೆಳೆಯುತ್ತಲೇ ಹೋಗಬಹುದು. ಈ ಮಧ್ಯವರ್ತಿ ಹಂತದ

ಹಿಡಿತವನ್ನು ಮೀರಲೆಂದೇ ಹಲವರು ಅನುಭವದೊಡನೆ ಮುಖಾಬಿಲೆಗೆ ಸಿದ್ಧರಾಗುತ್ತಿದ್ದಾರೆ. ಇವೇ ಕಾರಣದಿಂದಾಗಿಯೇ ಅಸ್ತಿತ್ವವಾದಕ್ಕೆ ಈ ಹೊತ್ತಿನ ಚಿಂತನೆಗಳಲ್ಲಿ ಹೆಚ್ಚಿನ ಮನ್ನಣೆ ಸಿಕ್ಕಿರಲೂ ಸಾಕು. ಮನುಷ್ಯನ ಇರವಿನ ಇಕ್ಕಟ್ಟುಗಳನ್ನು, ನೈತಿಕ ಬಿಕ್ಕಟ್ಟುಗಳನ್ನು, ಸಾವಿನ ಭಯವನ್ನು, ಹತಾಶೆಯ ಸ್ಥಿತಿಯನ್ನು ಚರ್ಚಿಸುವ ಅಸ್ತಿತ್ವವಾದ ಹಲವರಿಗೆ ಪ್ರಿಯವೆನಿಸುವುದು ಸಹಜ.

ಆದರೆ ನಮ್ಮ ಸಮಾಜದಲ್ಲಿರುವ ವಾಸ್ತವವನ್ನು ಮೀರುವ ಬಯಕೆ ಪೂರೈಕೆಯ ದಿಕ್ಕಿನಲ್ಲಿ ಅಸ್ತಿತ್ವವಾದ ಏನೂ ಕೊಡುಗೆ ನೀಡಲಾರದು. ಏಕೆಂದರೆ ಅಸ್ತಿತ್ವವಾದ ತಾನು ಮನುಷ್ಯನನ್ನು ಗ್ರಹಿಸುವ ಕ್ರಮದಲ್ಲಿಯೇ ಒಂದು ಸ್ಥಗಿತಸ್ಥಿತಿಯನ್ನು ಆರೋಪಿಸಿಕೊಂಡಿದೆ. ಹತಾಶೆ, ತಬ್ಬಲಿತನ ಇವೆಲ್ಲವೂ ಎಂದೆಂದಿಗೂ ಮನುಷ್ಯನ ಸಮಸ್ಯೆಗಳಾಗಿ ಉಳಿಯಲಿವೆ ಎನ್ನುವುದೇ ಆ ಸ್ಥಗಿತಸ್ಥಿತಿ. ಇದರಿಂದ ವ್ಯಕ್ತಿಗೆ ಬಿಡುಗಡೆಯೇ ಇಲ್ಲವೆಂಬ ನಿಲುವು ಯಾವ ಆಶೆಗೂ ಬೀಜವಾಗಲಾರದಷ್ಟೆ.

ಇನ್ನೊಂದು ದಿಕ್ಕಿನಿಂದ, ಅನುಭವದ ಮುಖಾಮುಖಿಯ ಬಯಕೆಯ ಪೂರೈಕೆಗೆ ನೆರವಾಗಬೇಕಿದ್ದ ವಿಜ್ಞಾನ, ಈಗ ಕೇವಲ ಮಧ್ಯವರ್ತಿ ಹಂತಕ್ಕೆ (ಶಾಬ್ದಿಕ ಮೇಲಾಟಕ್ಕೆ) ಸೀಮಿತವಾಗಿ ಹೋಗಿವೆ. ಅದು ಬಳಸುತ್ತಿರುವ ಸೂಕ್ಷ್ಮಾತಿಸೂಕ್ಷ್ಮ ಉಪಕರಣಗಳು, ಸಂಕೀರ್ಣ ಲೆಕ್ಕಾಚಾರಗಳು, ದೀರ್ಘವಾದ ಸೂತ್ರಗಳು ವಿಜ್ಞಾನವನ್ನೊಂದು ಆಚರಣೆಯನ್ನಾಗಿಸಿವೆ. ಯಾವುದೇ ಸಂಗತಿಯನ್ನು ನೇರವಾಗಿ 'ತಿಳಿಯುವುದು' ಇಂದು ಅಸಾಧ್ಯವಾಗಿದೆ. 'ಭೌತಿಕ' ಅನುಭವಕ್ಕೆ ನಿಲುಕದ ವಿವರಗಳ ಮೂಲಕವೇ ಬಹುಪಾಲು, ಎಲ್ಲ ವಿಜ್ಞಾನದ ಕ್ಷೇತ್ರಗಳು ಇಂದು ತಮ್ಮ ಅಧ್ಯಯನವನ್ನು ಮುಂದುವರೆಸುತ್ತಿವೆ. ಎಂದರೆ ವಿವರಗಳನ್ನು 'ಕಾಣುವುದು' ಅಸಾಧ್ಯವಾಗಿದೆ. ಆದರೆ ಅವುಗಳನ್ನು ಕುರಿತು ಎಣೆಯಿಲ್ಲದ ಚರ್ಚೆ ಮುಂದುವರೆದಿದೆ. ಇದು ಮಾನವಿಕ ಅಧ್ಯಯನ ಕ್ಷೇತ್ರಗಳಲ್ಲೂ ನಿಜವಾದದ್ದೇ ಸರಿ. ಮನೋವಿಜ್ಞಾನ ಸುಪ್ತಪ್ರಜ್ಞೆ'ಯನ್ನು ನೆಲೆಮಾಡಿಕೊಂಡಿದೆ. ಅರ್ಥವಿಜ್ಞಾನ, ಮಾನವಶಾಸ್ತ್ರಗಳು, ಭಾಷಿಕ ಒಳರಚನೆ, ಮೆದುಳಿನ ರಚನೆ ಮುಂತಾದ ಸಂಗತಿಗಳ ಬೆನ್ನುಹತ್ತಿವೆ. ಸಾಮಾಜಿಕ ಜೀವಶಾಸ್ತ್ರಜ್ಞರು (Sociobiologists) ಈಗ ಮನುಷ್ಯನ ವರ್ತನೆಗಳಿಗೆ ಕಾರಣಗಳನ್ನು 'ಕಾಣದ' ವಂಶವಾಹಿಗಳಿಗೆ ಆರೋಪಿಸತೊಡಗಿದ್ದಾರೆ.

ಇವರೆಲ್ಲರೂ ಹೇಳುತ್ತಿರುವುದೇನನ್ನು ? ಯಾವುದೇ ಕ್ಷೇತ್ರದಲ್ಲಾಗಲೀ ತೋರಿಕೆಯ ಸ್ವರೂಪವೇ ನಿಜವಲ್ಲವೆಂತಲೂ, ಅದರೊಳಗಿರುವ ಒಳರಚನೆಯೇ ನಿಜವೆಂತಲೂ ಹೇಳುತ್ತಿವೆ. ಅಲ್ಲದೆ ಆ ನಿಜವನ್ನು ಎಲ್ಲರೂ ಅರಿಯಲಾರರೆಂದೂ ಸಾಧಿಸುತ್ತಿವೆ. ಎಂದರೇನಾಯ್ತು ? ತಜ್ಞರಲ್ಲದ ಕೋಟಿಗಟ್ಟಲೆ ಜನ ನಿಜವಲ್ಲದ ತೋರ್ಕೆಯ ಜಗತ್ತನ್ನು ಮಾತ್ರ ಕಾಣುತ್ತಾ ಬದುಕುತ್ತಿದ್ದಾರೆಂದು ವಾದಿಸಿದಂತಾಯಿತು. ಸುತ್ತ ಇರುವುದೆಲ್ಲ ನೆರಳು; ಮಾಯೆ. ಈ ಭ್ರಮಾವರಣವನ್ನು ಛೇದಿಸಿ ತಜ್ಞರು ಮಾತ್ರ ಸತ್ಯವನ್ನು ಕಾಣಬಲ್ಲರು ಎನ್ನುವ ನಿಲುವು ಇದು.

ಹೀಗಾಗಿ, ಈಗ ವಿಜ್ಞಾನಿ ಮತ್ತು ಜನತೆಯ ನಡುವಣ ಸಂಬಂಧ ಸಾಂಪ್ರದಾಯಕ ಸಮಾಜದಲ್ಲಿದ್ದ ಪೂಜಾರಿ ಹಾಗೂ ಶ್ರದ್ಧಾಳುಗಳ ಸಂಬಂಧದಂತೆಯೇ ರೂಪುಗೊಂಡಿದೆ; ಧರ್ಮನಿರಪೇಕ್ಷ ಸ್ಥಿತಿ ಮಾತ್ರ ಹೊಸದು. ಧಾರ್ಮಿಕ ಸನ್ನಿವೇಶದಲ್ಲಿ ಈ ಸಂಬಂಧವನ್ನು ಮುರಿಯುವ ಪ್ರಯತ್ನಗಳು ನಡೆದಂತೆ ಈಗಲೂ ಕೂಡ ಜನತೆ ನೇರವಾಗಿ 'ಅರಿಯುವ' ಬಯಕೆಯನ್ನು ಪೂರೈಸಿಕೊಳ್ಳಲು ಹೊರಟಿದೆ. ಇದೊಂದು ರೀತಿಯಲ್ಲಿ ಪ್ರಜಾಪ್ರಭುತ್ವದ ಲಕ್ಷಣ. ಪಾಶ್ಚಾತ್ಯ ಸಂಸ್ಕೃತಿಯ ಇಕ್ಕಟ್ಟುಗಳ ವಿರುದ್ಧ ಎದ್ದಿರುವ ಬಂಡಾಯ. ಕೆಲವರಿಗೆ ಮಾತ್ರ ಮೀಸಲಾದುದನ್ನು ತಾವೂ ಪಡೆಯಬೇಕೆಂಬ ಹಂಬಲ. ನಾಗರಿಕ ಸಮಾಜಗಳಲ್ಲೆಲ್ಲಾ, ಈ ಹಿಂದೆ, ಮಠೀಯ ಕೇಂದ್ರಗಳು ಹಾಗೂ ಅಧಿಕಾರಸ್ಥರು ಮಧ್ಯವರ್ತಿಗಳಾಗಿ ಜನರನ್ನು 'ನಿಜ'ದಿಂದ ಪ್ರತ್ಯೇಕಿಸಲು ಯತ್ನಿಸಿದ್ದಕ್ಕೆ ಪುರಾವೆಗಳಿವೆ.

ಧರ್ಮನಿರಪೇಕ್ಷ ಮಾನವತಾವಾದವು, ಈ ಹಿಂದೆ ಹೇಳಿದಂತೆ, ಏನಿಲ್ಲವಾದರೂ ಎಲ್ಲ ಬಗೆಯ ಶ್ರೇಣೀಕರಣಗಳನ್ನು ಪ್ರಶ್ನಿಸಿದೆ. ಈ ಹಂತವನ್ನು ದಾಟಿದ ಸಮಾಜದಲ್ಲಿ ಪ್ರಜಾಪ್ರಭುತ್ವದ ಅಪೇಕ್ಷೆಗಳು ಬೇರು ಬಿಡುತ್ತವೆ. ಇಂಥಲ್ಲಿ ಅನಿವಾರ್ಯವಾಗಿ ಮಧ್ಯವರ್ತಿಗಳನ್ನು ನಿರಾಕರಿಸುವ ಪ್ರವೃತ್ತಿಗಳು ಬಲವಾಗುತ್ತವೆ. ಹೀಗೆ ಬಲವಾಗದೇ ಹೋದರೆ, ಇರುವುದನ್ನೆ ಒಪ್ಪುತ್ತಾ ಹೋದರೆ ಏನಾಗುತ್ತದೆ.? ಹೊಸ ಬಗೆಯ ಪುರೋಹಿತಶಾಹಿ ರೂಪುಗೊಳ್ಳುತ್ತದೆ, ರಾಜ್ಯ, ಪಕ್ಷ, ನಾಯಕ ಇವರು ಅಧಿಕಾರದ ಕೇಂದ್ರಗಳಾಗಿಬಿಡುತ್ತವೆ. ಸರ್ವಾಧಿಕಾರದ ಆಚರಣೆಗಳು ಹೊಸ ಧಾರ್ಮಿಕ ಅರ್ಥಗಳನ್ನು ಪಡೆದುಕೊಳ್ಳುತ್ತವೆ. ಕೈಗಾರೀಕರಣಗೊಂಡ ಸಮಾಜ ತನ್ನ ಒಂದು ಇಕ್ಕಟ್ಟಿನ ವೇಳೆಯಲ್ಲಿ ಯಾವುದಾದರೊಂದು ಧರ್ಮಕ್ಕೆ, ಅದು ಸೈತಾನನ ಧರ್ಮವೇ ಆಗಿರಲೊಲ್ಲದೇಕೆ?, ಜೋತು ಬೀಳುವುದು. ತಮ್ಮನ್ನೆ ಬಲಿಪಶುಗಳನ್ನಾಗಿ ಮಾಡಿಕೊಳ್ಳುವ ಮೋಹದಿಂದ ಜನತೆ ಬಿಡುಗಡೆ ಪಡೆಯುವುದೂ ಕಷ್ಟವಾಗುತ್ತದೆ.

ಇದು ಕತ್ತಲ ಹಾದಿ; ಇದಲ್ಲದೆ ಬೆಳಕಿನ ದಾರಿಯೂ ಒಂದಿದೆ. ಜೀವ ಚೈತನ್ಯದ ಸೆಲೆ ಬತ್ತದಂತೆ ಕಾಯ್ದುಕೊಳ್ಳಲು ಇರುವ ದಾರಿಯೂ ಇದೆ. ಪೇಟೆಗಳಲ್ಲಿ ಸ್ವತಂತ್ರ ನಾಗರಿಕನಾಗಿ ತನ್ನ ಕರ್ತವ್ಯವನ್ನು ಪೂರೈಸುತ್ತಿದ್ದ ಸಾಕ್ರಟೀಸನೇ ಈ ದಾರಿದೀಪ. ಗೊತ್ತಿರುವಂತೆ ಇವನು, ಯಾರೆಂದು ಯೋಚಿಸದೆ ಎಲ್ಲರೊಡನೆಯೂ ಮಾತನಾಡುತ್ತ ಅವರ ಚಿಂತನೆಯನ್ನು ಉದ್ದೀಪಿಸಿ ಎಚ್ಚರಗೊಳಿಸುತ್ತಿದ್ದನು. ಪ್ರವಾದಿಯಂತೆ, ದೇವದೂತನಂತೆ, ಪವಾಡ ಪುರುಷನಂತೆ ಈತ ನಡೆದುಕೊಳ್ಳಲಿಲ್ಲ. ಮುಜುಗರವನ್ನುಂಟು ಮಾಡುವ ಪ್ರಶ್ನೆಯನ್ನು ತನಗೇ ಹಾಕಿಕೊಳ್ಳಲು, ಇತರರ ಎದುರು ಮಂಡಿಸಲು ಆತನು ಹಿಂಜರಿಯಲಿಲ್ಲ. ಆತ ಯಾವುದೇ ಸಂಗತಿಯನ್ನು ಸ್ವಂತ ಅನುಭವದ ಪರಿಧಿಯ ಆಚೆ ನಿಂತು ಕಾಣಲು ಯತ್ನಿಸಲಿಲ್ಲ ಎಂಬುದೇ ಇಲ್ಲಿ ಮುಖ್ಯವಾಗಿ ಗಮನಿಸಬೇಕು. ಜೊತೆಗೆ ಹೇಳಬೇಕಾದುದನ್ನು ಪ್ರೀತಿಯಿಂದ ನಂಬಿಕೆಯಿಂದ ಹೇಳುವ ಬಗೆಯೂ ಇತ್ತು. ಇದಲ್ಲದೆ ಚರ್ಚೆಯ ಮೋಜಿಗಾಗಿ ಮಾತ್ರವೇ ಚರ್ಚೆ ಮಾಡುವ

ಬಗೆ ಅವನದಲ್ಲ. ಅದನ್ನು ಸಾಧನವನ್ನಾಗಿಸಿಕೊಂಡು ಆ ಮೂಲಕ, ವ್ಯಕ್ತಿಯು ಮೂಲಬಯಕೆಗಳನ್ನು, ತರ್ಕಾತೀತವಾದುದನ್ನು ಕಾಣುವ ಅಪೇಕ್ಷೆಯನ್ನು ಪೂರೈಸಿಕೊಳ್ಳಬೇಕೆಂದು ಅವನು ಯೋಜಿಸಿದಂತಿದೆ.

ಇವನ ಗುರು ಪೈಥಾಗೊರಸನ ಬುದ್ಧಿಮತ್ತೆ ಹಾಗೂ ದರ್ಶನ, ಇವನ ಶಿಷ್ಯ ಪ್ಲೇಟೋವಿನಲ್ಲೂ ಕಾಣುತ್ತವೆ. ಆದರೆ ಇವರಿಬ್ಬರೂ ಸಾಕ್ರಟೀಸನಂತೆ ಬೀದಿಗೆ ಬಂದು ಜನರ ನಡುವೆ ನಿಂತು 'ಸ್ವಂತ'ದ ಮೂಲಕ ನಿಜವನ್ನು ತಿಳಿಯುವ ಸಾಮರ್ಥ್ಯವನ್ನು ಪಡೆದಿರಲಿಲ್ಲ. ಅತ್ತ ಪೈಥಾಗೊರಸ್ ರಹಸ್ಯಪಂಥಕ್ಕೆ ಸೇರಿಹೋದರೆ, ಇತ್ತ ಪ್ಲೇಟೋ ಕೇವಲ ಬೌದ್ಧಿಕ ಚರ್ಚೆಗಳಿಗೆ ಮಾತ್ರ ಮೀಸಲಾಗಿಹೋದ. ಇಂದು ನಮ್ಮ ಸುತ್ತ ಇವರಿಬ್ಬರೇ ವಾದರಿಗಳಾಗಿ ಕಾಣುತ್ತಿದ್ದಾರೆ. ಒಂದು ಕಡೆ ಮೋಕ್ಷಗಾಮಿಯಾದ ಪಂಥಗಳು ವಾತಾವರಣದಲ್ಲಿ ಜನದೂರವಾಗಿ ಬೆಳೆಯುತ್ತಿದ್ದರೆ, ಇನ್ನೊಂದು ಕಡೆ 'ಸತ್ಯಾನ್ವೇಕ್ಷಿ' ವಿಜ್ಞಾನ ಪಂಥಗಳೂ ತಜ್ಞರನ್ನು ಮಾತ್ರ ಬೆಳೆಸುತ್ತಿವೆ. ಇವೆರಡರ ನಡುವಣ ಮಾರ್ಗ ಹಿಡಿದ ಸಾಕ್ರಟೀಸ್ ಮಾತ್ರ ನಮಗೆ ದಾರಿ ತೋರಿಸಬಲ್ಲವನಾಗಿದ್ದಾನೆ. ಇದಂತು ಖಚಿತ: ನಾವು ಹುಡುಕಿದ ಹೊರತು ಏನೂ ಸಿಗಲಾರದು; ದಿಟ್ಟರಾದ ಹೊರತು ಏನನ್ನೂ ಪಡೆಯಲಾರೆವು.

---

ವಿಜ್ಞಾನವೇನೋ ಮಾನವಕುಲದ ಶ್ರೇಯಸ್ಸಿಗೆ ಬೇಕಾದ ಮತ್ತು ಜೀವಕೋಟಿಯ ಹಿತಕ್ಕೆ ಒದಗಬಹುದಾದ ಅನೇಕ ಬಗೆಯ ತಿಳಿವನ್ನು ನಮಗೆ ಒದಗಿಸಿದೆ. ನಿತ್ಯಜೀವನದಲ್ಲಿಯೇ ನಾವದನ್ನು ಬಳಕೆಗೆ ತಂದಿಲ್ಲ. ಶೀಘ್ರ ಲಾಭ ಸಂಪಾದನೆಯ ಒಂದು ದೃಷ್ಟಿ ಮಾತ್ರವೇ ದೇಶದ ಉದ್ಯಮಿಗಳಿಗೂ, ಆಡಳಿತ ನಡೆಯಿಸುವ ನಾಯಕರ ಕಣ್ಣಿಗೂ ಕಾಣಿಸುತ್ತಿದೆ. ಶೀಘ್ರ ಲಾಭ ಸಂಪಾದನೆಯ ಬೆನ್ನಿಗೆ, ಅದರಿಂದಲೇ ಉದ್ಭವಿಸುವ ಹಾನಿಗಳನ್ನು ತಡೆಯಬೇಕೆಂದು ಮಾತ್ರ ಅವರಿಗೆ ಹೊಳೆಯುತ್ತಲಿಲ್ಲ.

—ಶಿವರಾಮ ಕಾರಂತ

(ಸ್ವಾರ್ಥಿ ಮಾನವ)

# ಭಾರತೀಯ ರಾಜಕೀಯ ವ್ಯವಸ್ಥೆ : ಒಂದು ಚಿಕಿತ್ಸಕ ದೃಷ್ಟಿ

○

ಬಾಪು ಹೆದ್ದೂರಶೆಟ್ಟಿ

ಇದು ಜನತಾಂತ್ರಿಕ ಗಣರಾಜ್ಯಗಳ ಯುಗ. ರಾಜಪ್ರಭುತ್ವ ಇನ್ನೂ ಉಳಿದು ಕೊಂಡಿರುವ ಕಡೆಗಳಲ್ಲಿ ಕೂಡ ಅದು ಸಂವಿಧಾನಾತ್ಮಕ ರಾಜಪ್ರಭುತ್ವವಾಗಿ ಪರಿಣಮಿಸಿದೆ. ಪಶ್ಚಿಮ ಯುರೋಪಿನ ದೇಶಗಳಲ್ಲಿ ಜನತಾಂತ್ರಿಕ ಗಣರಾಜ್ಯ ವಾದ ಬೇರು ಬಿಟ್ಟಿದೆ. ಆದುದರಿಂದಲೇ ಕಳೆದ ಸುಮಾರು ಅರ್ಧ ಶತಮಾನದಲ್ಲಿ ಸ್ವಾತಂತ್ರ್ಯ ಪಡೆದ ಮೂರನೆಯ ಜಗತ್ತಿನ ಎಲ್ಲಾ ದೇಶಗಳೂ ಸಾರ್ವತ್ರಿಕ ಮತದಾನದ ಹಕ್ಕನ್ನು ಆಧರಿಸಿದ ಹೊಣೆ ಗಾರ ಸರಕಾರವನ್ನು ನೀಡುವ ಜನತಾಂತ್ರಿಕ ಗಣರಾಜ್ಯವಾದಿ ಸಂವಿಧಾನಗಳನ್ನೇ ಅಂಗೀಕರಿಸಿವೆ. ಬ್ರಿಟಿಷರಿಂದ ಸ್ವಾತಂತ್ರ್ಯ ಪಡೆದ ನಂತರ ಭಾರತವೂ ಇದೇ ರೀತಿ ಜನತಾಂತ್ರಿಕ ಗಣರಾಜ್ಯವಾದಿ ಸಂವಿಧಾನವನ್ನೇ ಅಂಗೀಕರಿಸಿದೆ. ಇವುಗಳಲ್ಲಿ ಬಹು ಸಂಖ್ಯ ರಾಷ್ಟ್ರಗಳು ಸಂಸದೀಯ ಅಥವಾ ಪ್ರಾತಿನಿಧಿಕ, ಜನತಾಂತ್ರಿಕ ಸರಕಾರಗಳನ್ನು ಅಂಗೀಕರಿಸಿವೆ. ಹಲವು ರಾಷ್ಟ್ರಗಳು ಅಧ್ಯಕ್ಷೀಯ ಮಾದರೀಯ ಸರಕಾರಗಳನ್ನು ಅಂಗೀಕರಿಸಿವೆ. ಭಾರತ ಅಂಗೀಕರಿಸಿದ್ದು ಸಂಸದೀಯ ಅಥವಾ ಪ್ರಾತಿನಿಧಿಕ ಜನತಂತ್ರವನ್ನೇ.

ಹಾಗಾದರೆ ಈ ಸಂಸದೀಯ ಅಥವಾ ಪ್ರಾತಿನಿಧಿಕ ಜನತಂತ್ರದ ಪ್ರಮುಖ ಲಕ್ಷಣಗಳಾವುವು ? ಈ ಜನತಾಂತ್ರಿಕ ಪಿರಮಿಡ್ಡಿನ ಅಡಿಪಾಯದಲ್ಲಿ ಇರುವವರು ಸಾರ್ವತ್ರಿಕ ವಯಸ್ಕ ಮತದಾನದ ಅಧಿಕಾರವಿರುವ ಮತದಾರರು. ಎಲ್ಲಾ ಮಾನವರೂ ಸಮಾನರು ಎಂಬ ತತ್ವವನ್ನಾಧರಿಸಿ ಇವರಿಗೆಲ್ಲಾ ಮತದಾನದ ಹಕ್ಕನ್ನು ನೀಡಲಾಗಿದೆ. ಇದರ ನಂತರ ಅಧಿಕಾರಕ್ಕಾಗಿ ಸ್ಪರ್ಧಿಸುವ ರಾಜಕೀಯ ಪಕ್ಷಗಳ ವ್ಯವಸ್ಥೆ ಇದೆ. ಇನ್ನಿತರ ದೇಶಗಳ ಸಂವಿಧಾನಗಳಲ್ಲೂ ಇಲ್ಲದಿರುವಂತೆ ನಮ್ಮ ದೇಶದ ಸಂವಿಧಾನ ದಲ್ಲಿಯೂ ರಾಜಕೀಯ ಪಕ್ಷಗಳ ಪ್ರಸ್ತಾಪವಿಲ್ಲ. ಆದರೆ ಸಂಸದೀಯ ಜನತಾಂತ್ರಿಕ ವ್ಯವಸ್ಥೆಯಲ್ಲಿ ಅವು ಅನಿವಾರ್ಯ. ಹಲವು ದೇಶಗಳಲ್ಲಿ ಎರಡೇ ಪ್ರಮುಖ ಪಕ್ಷ ಗಳಿರುವ "ಎರಡು ಪಕ್ಷಗಳ ವ್ಯವಸ್ಥೆ" ಇದೆ. ಇಂತಹ ವ್ಯವಸ್ಥೆಯನ್ನು ಹಲವರು ಆದರ್ಶ ವ್ಯವಸ್ಥೆ ಎಂದು ಭಾವಿಸುತ್ತಾರೆ. ಇನ್ನಿತರ ದೇಶಗಳಲ್ಲಿ ಹಲವಾರು ಸಣ್ಣ –ದೊಡ್ಡ ಪಕ್ಷಗಳಿರುವ 'ಬಹು–ಪಕ್ಷೀಯ ವ್ಯವಸ್ಥೆ' ಇದೆ. ನಮ್ಮ ದೇಶದಲ್ಲಿ ಇಂತಹುದೇ 'ಬಹು–ಪಕ್ಷೀಯ ವ್ಯವಸ್ಥೆ' ಇದೆ ಎನ್ನಬಹುದು.

ನಿಗದಿ ಪಡಿಸಿದ ಅವಧಿಗಾಗಿ ಮತದಾರರು ಸರಕಾರದ ಶಾಸನಾಂಗವನ್ನು ಅಂದರೆ ವಿಧಾನಸಭೆಯನ್ನು ಆಯ್ಕೆ ಮಾಡುತ್ತಾರೆ ದೇಶಕ್ಕಾಗಿ ಅಧಿನಿಯಮಗಳನ್ನು ರಚಿಸುವ ಅಧಿಕಾರ ಈ ಶಾಸನಾಂಗಕ್ಕೆ ಜವಾಬ್ದಾರನಾಗಿರಬೇಕು. ಆದುದರಿಂದ ಅದು

ಶಾಸನಾಂಗದ ವಿಶ್ವಾಸವನ್ನು ಪಡೆದುಕೊಂಡಿರಬೇಕು. ಅಂದರೆ ಶಾಸನಾಂಗದಲ್ಲಿ ಅದಕ್ಕೆ ಬಹುಮತದ ಬೆಂಬಲವಿರಬೇಕು. ಇದನ್ನೇ ಕ್ಯಾಬಿನೆಟ್ ವ್ಯವಸ್ಥೆ ಎಂದೂ ಕರೆಯುತ್ತಾರೆ.

ಈ ಜನತಾಂತ್ರಿಕ ಪಿರಮಿಡ್ಡಿನ ಶೀರ್ಷ–ಸ್ಥಾನದಲ್ಲಿರುವಾತನೇ ಪ್ರಧಾನಮಂತ್ರಿ. ಈತ ಶಾಸನಾಂಗದ ವಿಶ್ವಾಸವನ್ನು ಪಡೆದುಕೊಂಡಿರುತ್ತಾನೆ. ಅಂದರೆ ಶಾಸನಾಂಗ ದಲ್ಲಿ ಬಹುಮತವಿರುವ ಪಕ್ಷದ ನಾಯಕನಾಗಿರುತ್ತಾನೆ. ಈತನೇ ಸರಕಾರದ ಕಾರ್ಯಾಂಗದ ಪ್ರಮುಖ ಕೂಡಾ.

ಭಾರತದ ರಾಜಕೀಯ ವ್ಯವಸ್ಥೆಯ ಈ ಪ್ರಮುಖ ಲಕ್ಷಣಗಳನ್ನು ಬ್ರಿಟಿಷ್ ರಾಜಕೀಯ ವ್ಯವಸ್ಥೆಯ ಪ್ರಮುಖ ಲಕ್ಷಣಗಳೊಂದಿಗೆ ಹೋಲಿಸಿ ನೋಡಿದರೆ ಬ್ರಿಟಿಷ್ ಮಾದರಿಯನ್ನೇ ಅನುಸರಿಸಿ ಭಾರತದ ರಾಜಕೀಯ ವ್ಯವಸ್ಥೆಯನ್ನು ರಚಿಸ ಲಾಗಿದೆ ಎನ್ನುವುದು ಸ್ಪಷ್ಟವಾಗುತ್ತದೆ. ಭಾರತದಲ್ಲಿಯ ಸಂವಿಧಾನಿಕ ಬೆಳವಣಿಗೆಗಳ ಇತಿಹಾಸದ ಅಧ್ಯಯನ ಕೂಡಾ ಇದನ್ನೆ ಪುಷ್ಟೀಕರಿಸುತ್ತದೆ. ಈ ಎರಡೂ ವ್ಯವಸ್ಥೆ ಗಳಲ್ಲಿರುವ ವ್ಯತ್ಯಾಸವೆಂದರೆ ಇಂಗ್ಲೆಂಡಿನಲ್ಲಿ ಸಂವಿಧಾನಾತ್ಮಕ ರಾಜಪ್ರಭುತ್ವವಿದೆ. ಆದರೆ ಭಾರತ ಒಂದು ಗಣರಾಜ್ಯ. ಇದೇ ರೀತಿ ಭಾರತ ಒಂದು ಒಕ್ಕೂಟ, ಒಂದು ಫೆಡರಲ್ ವ್ಯವಸ್ಥೆ, ಇಂಗ್ಲೆಂಡು ಒಕ್ಕೂಟವಲ್ಲ.

ನಾವು ಈ ರಾಜಕೀಯ ವ್ಯವಸ್ಥೆಯಿಂದ ಏನು ಬಯಸುತ್ತೇವೆ? ಈ ರಾಜ ಕೀಯ ವ್ಯವಸ್ಥೆ ನಮ್ಮ ಬಯಕೆಗಳನ್ನು ಈಡೇರಿಸಿದೆಯೇ?

ರಾಜಕೀಯ ವ್ಯವಸ್ಥೆಯ ಅತ್ಯಂತ ಮಹತ್ವದ ಕೆಲಸವೆಂದರೆ ಸರಕಾರವನ್ನು ಒದಗಿಸುವುದು. ನ್ಯಾಯ ಮತ್ತು ಶಿಸ್ತು ಪರಿಪಾಲನೆಯೇ ಸರಕಾರದ ಅಸ್ತಿತ್ವಕ್ಕೆ ಸಮರ್ಥನೆ ಹಾಗೂ ಅತ್ಯಂತ ಕಡಿಮೆ ಆಡಳಿತ ನಡೆಸುವ ಸರಕಾರವೇ ಶ್ರೇಷ್ಠವಾದ ಸರಕಾರ ಎಂಬ ತತ್ವಗಳು ಈಗ ಇತಿಹಾಸದ ಮಾತಾಗಿವೆ. ಸಮಾಜವಾದದ ಬೆಳವಣಿಗೆ ಸರಕಾರದ ಅಸ್ತಿತ್ವಕ್ಕೆ ಇರುವ ಸಮರ್ಥನೆಗಳಲ್ಲಿ ಮೂಲಭೂತ ಬದಲಾವಣೆ ಗಳನ್ನು ತಂದಿದೆ. ಆರ್ಥಿಕವಾಗಿ ಮುನ್ನಡೆದಿರುವ ದೇಶಗಳಲ್ಲಿ ಸಾಮಾಜಿಕ ಭದ್ರತೆ ಹಾಗೂ ಸಾಮಾಜಿಕ ಸೇವೆಗಳನ್ನು ಒದಗಿಸುವ ಮೂಲಕ ಸಂಪತ್ತಿನ ಸಮಾನ ವಿತರಣೆಯನ್ನು ಸಾಧಿಸಲು ಮಧ್ಯ ಪ್ರವೇಶಿಸುವುದೇ ಇಂದು ಸರಕಾರದ ಅಸ್ತಿತ್ವಕ್ಕೆ ಸಮರ್ಥನೆಯಾಗಿದೆ. ಹಿಂದುಳಿದ ಅರ್ಥ ವ್ಯವಸ್ಥೆಗಳ ಸಂದರ್ಭದಲ್ಲಿ ಬರೀ ಸಂಪತ್ತಿನ ಸಮಾನ ವಿತರಣೆಗಾಗಿ ಮಧ್ಯ ಪ್ರವೇಶಿಸುವುದು ಸರಕಾರದ ಲಕ್ಷಣವಾಗಿದೆ. ಬದ ಲಾದ ಈ ಅಪೇಕ್ಷೆಗಳ ಸಂದರ್ಭದಲ್ಲಿ ಭಾರತದ ರಾಜಕೀಯ ವ್ಯವಸ್ಥೆ ಎಷ್ಟರಮಟ್ಟಿಗೆ ಆರ್ಥಿಕ ಪ್ರಗತಿ ಹಾಗೂ ಸಂಪತ್ತಿನ ಸಮಾನ ವಿತರಣೆಗಳ ಈ ಗುರಿಗಳ ಕಡೆಗೆ ಮುನ್ನಡೆಯುತ್ತಿರುವ ಸರಕಾರವನ್ನು ನಮಗೆ ನೀಡಿದೆ? ನಮ್ಮ ರಾಜಕೀಯ ವ್ಯವಸ್ಥೆಯ ಚಿಕಿತ್ಸಕ ವಿಶ್ಲೇಷಣೆಗೆ ಇದೇ ತಾತ್ವಿಕ ಚೌಕಟ್ಟಾಗಬೇಕು. ಭಾರತದ ರಾಜಕೀಯ ವ್ಯವಸ್ಥೆ ಜನರ ಆಶೋತ್ತರಗಳಿಗೆ ಪ್ರತಿಯಾಗಿ ಸ್ಪಂದಿಸುತ್ತಿದೆಯೇ?

ಹಿಂದುಳಿದ ಅರ್ಥ ವ್ಯವಸ್ಥೆ ಎಷ್ಟರಮಟ್ಟಿಗೆ ಪ್ರಯೋಜನಕಾರಿಯಾದದ್ದು ? ಭಾರತದ ರಾಜಕೀಯ ವ್ಯವಸ್ಥೆ ಉತ್ತರಿಸಬೇಕಾಗಿರುವ ಪ್ರಶ್ನೆಗಳಲ್ಲಿ ಇವು ಪ್ರಮುಖವಾದವು.

ಮತದಾರರ ಬಗ್ಗೆ ಸಾಮಾನ್ಯವಾದ ಹಲವಾರು ಟೀಕೆಗಳಿವೆ ಎಲ್ಲರೂ ತಮ್ಮ ಮತದಾನದ ಹಕ್ಕನ್ನು ಚಲಾಯಿಸುವುದಿಲ್ಲ; ಅವರ ಶೈಕ್ಷಣಿಕ ಅಥವಾ ಸಾಕ್ಷರತೆಯ ಸ್ತರ ಅತ್ಯಂತ ಕೆಳಗಿರುವುದರಿಂದ ಮತದಾರರು ಉತ್ತಮ ಸರಕಾರವನ್ನು ಆಯ್ಕೆ ಮಾಡುವುದು ಸಾಧ್ಯವಾಗುವುದಿಲ್ಲ; ಒಳ್ಳೆಯ ಸರಕಾರವನ್ನು ಆಯ್ಕೆ ಮಾಡುವ ಉದ್ದೇಶದ ಬದಲು ಬೇರೆ ಕಾರಣಗಳಿಂದ ಮತದಾರರು ಪ್ರಭಾವಿತರಾಗುತ್ತಾರೆ ಇತ್ಯಾದಿ. ಆದರೆ 1967, 71, 77 ಹಾಗೂ 80ರ ಚುನಾವಣಾ ಫಲಿತಾಂಶಗಳನ್ನು ಸೂಕ್ಷ್ಮವಾಗಿ ವಿಶ್ಲೇಷಿಸಿದರೆ ಸಾಕ್ಷರತೆಗೂ ರಾಜಕೀಯ ಪ್ರಜ್ಞೆಗೂ ಸಂಬಂಧವೇ ಇಲ್ಲ ಎಂಬುದೂ ಹಾಗೂ ಸಾಕ್ಷರತೆ ಅತಿ ಹೆಚ್ಚಾಗಿರುವ ಇನ್ನಾವುದೇ ಮತದಾರರು ರಾಜಕೀಯ ವಾಸ್ತವಿಕತೆಗೆ ಪ್ರತಿಸ್ಪಂದಿಸುವ ರೀತಿಯಲ್ಲಿಯೇ ಭಾರತದ ನಿರಕ್ಷರ ಮತದಾರರೂ ಪ್ರತಿಸ್ಪಂದಿಸಿದ್ದಾರೆ ಎನ್ನುವುದೂ ಸ್ಪಷ್ಟವಾಗುತ್ತದೆ. ಭಾರತದ ಮತದಾರರು ಇಂದು ಪ್ರಜ್ಞಾವಂತರಾಗಿದ್ದಾರೆ ಹಾಗೂ ಅವರ ಕೈಗಳಲ್ಲಿ ಭಾರತದ ಜನತಂತ್ರ ಸುರಕ್ಷಿತವಾಗಿದೆ ಎಂದು ಬಹುಶಃ ನಿಸ್ಸಂದೇಹವಾಗಿ ಹೇಳಬಹುದು.

ಪಕ್ಷಗಳಿರುವ ರಾಜಕೀಯ ವ್ಯವಸ್ಥೆ ಸಂಘರ್ಷದ ರಾಜಕೀಯದಲ್ಲಿ ಪರಿಣಮಿಸುತ್ತದೆ ಹಾಗೂ ಹಿಂದುಳಿದ ಆರ್ಥಿಕ ವ್ಯವಸ್ಥೆಯ ರಾಜಕೀಯ ಹಾಗೂ ಆರ್ಥಿಕ ಅಭಿವೃದ್ಧಿಗೆ ಇಂತಹ ರಾಜಕೀಯ ಸಹಾಯಕವಾಗುವುದಿಲ್ಲ ಎಂದು ವಾದಿಸಲಾಗುತ್ತಿದೆ. ಒಂದೆಡೆ ಸಾಮಾನ್ಯವಾಗಿ ಇಂತಹ ಸಂಘರ್ಷದ ರಾಜಕೀಯ ಸಮಾಜದಲ್ಲಿ ಅದರಲ್ಲೂ ಹಿಂದುಳಿದ ಆರ್ಥಿಕ ವ್ಯವಸ್ಥೆಗಳಲ್ಲಿ ಪ್ರತಿಸ್ಪರ್ಧೆಯನ್ನು ಹುಟ್ಟು ಹಾಕುತ್ತದೆ ಹಾಗೂ ಇದರಿಂದಾಗಿ ಹಲವು ಸಲ ಸಂಪೂರ್ಣ ರಾಜಕೀಯ ವ್ಯವಸ್ಥೆಯೇ ಕುಸಿದು ಬೀಳುತ್ತದೆ ಎಂದು ವಾದಿಸಲಾಗುತ್ತಿದೆ. ಮೂರನೆಯ ಜಗತ್ತಿನ ಹಲವಾರು ದೇಶಗಳಲ್ಲಿ ಜನತಂತ್ರದ ಕುಸಿತ ಹಾಗೂ ಸರ್ವಾಧಿಕಾರದ ಹೇರಿಕೆಗಳಿಗೆ ಸಂಘರ್ಷದ ಈ ರಾಜಕೀಯ ಕಡಿಮೆ ಕಾರಣವೇನಲ್ಲ ಎಂದು ಹೇಳಲಾಗುತ್ತಿದೆ. ಇನ್ನೊಂದೆಡೆಗೆ ಈ ಸಂಘರ್ಷದ ರಾಜಕೀಯ ಜನರ ರಚನಾತ್ಮಕ ಆಶೋತ್ತರಗಳ ಹಾಗೂ ಶಕ್ತಿ ಚಿಲುಮೆಗಳ ಮೂಲವನ್ನೇ ತಿಂದು ಹಾಕುತ್ತದೆ ಎಂದೂ ಹಾಗೂ ಇದು ಹಿಂದುಳಿದ ಬಡ ರಾಷ್ಟ್ರಗಳ ಅಸ್ತಿತ್ವಕ್ಕೇ ಮೂಲವಾಗಿರುವ ಆರ್ಥಿಕ ಅಭಿವೃದ್ಧಿಯನ್ನು ಕುಂಠಿತಗೊಳಿಸುತ್ತದೆ ಎಂದೂ ಹೇಳಲಾಗುತ್ತದೆ. ಸರ್ವಾಧಿಕಾರದ ಕೆಸರಿನಲ್ಲಿ ಸಿಕ್ಕಿ ಹಾಕಿಕೊಳ್ಳುವುದಕ್ಕಿಂತ ಮೊದಲು ಸಂಸದೀಯ ಜನತಾಂತ್ರಿಕ ವ್ಯವಸ್ಥೆ ಇರುವ ಯಾವ ದೇಶವೂ ಹೇಳಿಕೊಳ್ಳುವಂತಹ ಆರ್ಥಿಕ ಪ್ರಗತಿಯನ್ನು ಸಾಧಿಸದೇ ಇರುವುದನ್ನು ಈ ವಾದಕ್ಕೆ ಉದಾಹರಣೆಯ ರೂಪದಲ್ಲಿ ಬಳಸಲಾಗುತ್ತಿದೆ

ನಮ್ಮ ದೇಶದ ರಾಜಕೀಯ ವ್ಯವಸ್ಥೆಯ ಮೇಲಿನ ಸ್ತರಗಳ ಸೂಕ್ಷ್ಮ ಅಧ್ಯಯನ ಪ್ರಧಾನ ಮಂತ್ರಿಗಳ ಕೈಯಲ್ಲಿ ಅಧಿಕಾರ ಗಂಡಾಂತರಕಾರಿ ರೀತಿಯಲ್ಲಿ ಕೇಂದ್ರೀಕೃತ

ವಾಗುತ್ತಿರುವುದನ್ನು ಗಮನಕ್ಕೆ ತರುತ್ತದೆ. ಶಾಸನಾಂಗದ ಚುನಾವಣೆಯೇ ಜನ ತಮ್ಮ ಅಧಿಕಾರಗಳನ್ನು ಅದಕ್ಕೆ ಹಸ್ತಾಂತರಿಸುವ ಒಂದು ಕ್ರಿಯೆ. ಆದರೆ ಸಂಸದೀಯ ಜನತಂತ್ರದಲ್ಲಿ ಇದು ಅನಿವಾರ್ಯ ಅನಿಷ್ಟ. ಆದರೆ ಶಾಸನಾಂಗದ ಅಧಿಕಾರ ಕ್ರಮೇಣವಾಗಿ ಮೊದಲಿಗೆ ಮಂತ್ರಿ ಮಂಡಲದಲ್ಲಿಯೂ ಕೊನೆಗೆ ಪ್ರಧಾನಮಂತ್ರಿಯ ಕೈಯಲ್ಲಿಯೂ ಕೇಂದ್ರೀಕೃತವಾಗುವುದು ಕಂಡು ಬರುತ್ತಿದೆ. ಈ ಬೆಳವಣಿಗೆಯನ್ನೆ ಸೈದ್ಧಾಂತಿಕವಾಗಿ ಸಾಮಾಜಿಕ ಒಪ್ಪಂದ, ಸಂಸತ್ತಿನ ಸಾರ್ವಭೌಮತ್ವ, ಕ್ಯಾಬಿನೆಟ್ ವ್ಯವಸ್ಥೆ ಹಾಗೂ ಕೊನೆಯದಾಗಿ 'ಪ್ರಧಾನ ಮಂತ್ರಿ ಸಮಾನದಲ್ಲಿ ಮೊದಲಿಗೆ ಮಾತ್ರ' ಎಂಬ ಅನಿಶ್ಚಯತೆಯ ಹೇಳಿಕೆಗಳಲ್ಲಿ ಕಾಣಬಹುದು.

ನಮ್ಮ ದೇಶದಲ್ಲಿ ಮೊದಲ ಪ್ರಧಾನ ಮಂತ್ರಿಗಿಂತ ಇಂದಿನ ಪ್ರಧಾನ ಮಂತ್ರಿ ಹೆಚ್ಚು ಅಧಿಕಾರವನ್ನು ಚಲಾಯಿಸುತ್ತಾರೆ. ರಾಜಕೀಯ ಅಧಿಕಾರದ ಕೇಂದ್ರಿಕರಣದ ಈ ಪ್ರವೃತ್ತಿ ಜಗತ್ತಿನ ಸುಮಾರು ಎಲ್ಲಾ ದೇಶಗಳಲ್ಲೂ ಕಂಡು ಬರುತ್ತಿದೆ. ಹಲವು ದೇಶಗಳಲ್ಲಿ ಹೆಚ್ಚಿಗೆ ಕಂಡುಬಂದರೆ ಇನ್ನೂ ಹಲವು ದೇಶಗಳಲ್ಲಿ ಕಡಿಮೆ ಕಂಡುಬರುತ್ತಿದೆ ಅಷ್ಟೇ. ಕಮ್ಯುನಿಸ್ಟ್ ದೇಶಗಳಲ್ಲಿ ಇದು ಅತ್ಯಂತ ಹೆಚ್ಚಿಗಿರುವುದು ಕಂಡುಬರುತ್ತದೆ. ಇಲ್ಲಿ ಅಧಿಕಾರ ಜನರಿಂದ ಕಮ್ಯುನಿಸ್ಟ್ ಪಕ್ಷಕ್ಕೆ, ಪಕ್ಷದಿಂದ ಪಕ್ಷದ ಪಾಲಿಟ್ ಬ್ಯೂರೋಗೆ, ಪಾಲಿಟ್ ಬ್ಯೂರೋದಿಂದ ಸರ್ವಾಧಿಕಾರಿಗೆ ಹಸ್ತಾಂತರಗೊಳ್ಳುತ್ತಾ, ಕೇಂದೀಕೃತವಾಗುತ್ತಾ ಹೋಗುತ್ತದೆ. ಭಾರತದಂತಹ ಹಿಂದುಳಿದ ದೇಶಗಳಲ್ಲಿ ಈ ಕೇಂದ್ರೀಕರಣ ಗಮನಾರ್ಹವಾಗಿ ಕಂಡು ಬರುತ್ತದೆ. ಇಂಗ್ಲೆಂಡು ಸ್ವೀಡನ್ನಿನಂತಹ ದೇಶಗಳಲ್ಲಿ ಇದು ಅತ್ಯಂತ ಕಡಿಮೆ ಇರುವುದು ಕಂಡು ಬರುತ್ತದೆ. ಅಧಿಕಾರದ ಕೇಂದ್ರೀಕರಣ ಹೆಚ್ಚಿದಂತೆಲ್ಲಾ ಸರಕಾರ ಜನರ ಆಶೋತ್ತರಗಳಿಗೆ ಪ್ರತಿಸ್ಪಂದಿಸುವುದು ಕಡಿಮೆಯಾಗುತ್ತದೆ. ಆದರೆ ಸರಕಾರದ ದಬ್ಬಾಳಿಕೆ ಮಾತ್ರ ಹೆಚ್ಚುತ್ತದೆ. ಜನರ ಆಶೋತ್ತರಗಳಿಗೆ ಪ್ರತಿಸ್ಪಂದಿಸದ ಹಾಗೂ ದಬ್ಬಾಳಿಕೆಯನ್ನು ನಡೆಸುವ ಸರಕಾರ ಸಮಾನತೆಯನ್ನು ಆಧರಿಸಿದ ಸಮೃದ್ಧ ಸಮಾಜವನ್ನು ಕಟ್ಟುವುದು ಸಾಧ್ಯವಿಲ್ಲ.

ಸಂಸದೀಯ ಜನತಂತ್ರದ ಈ ಎರಡು ಸಮಸ್ಯೆಗಳು, ಅಂದರೆ ಪ್ರತಿ ಸ್ಪರ್ಧೆಯ ರಾಜಕೀಯ ಮತ್ತು ಅಧಿಕಾರದ ಕೇಂದ್ರೀಕರಣ ಇವು ಜನತಂತ್ರದ ಅಂತಃಸತ್ವವನ್ನೇ ನಿರಾಕರಿಸುತ್ತವೆ; ಅದರ ಅಸ್ತಿತ್ವವನ್ನೇ ಅಪಾಯಕ್ಕೀಡು ಮಾಡುತ್ತವೆ. ಜೊತೆಗೆ ಆರ್ಥಿಕ ಪ್ರಗತಿಯನ್ನು ಕುಂಠಿತಗೊಳಿಸುತ್ತವೆ. ಹಾಗಾದರೆ ಸಂಸದೀಯ ಜನತಂತ್ರ ಎಷ್ಟರಮಟ್ಟಿಗೆ ಒಂದು ಯಶಸ್ವಿ ರಾಜಕೀಯ ವ್ಯವಸ್ಥೆ ಎಂದು ಹೇಳುವುದು ಸಾಧ್ಯ? ಅದು ಯಶಸ್ವಿಯಾಗಿಲ್ಲ ಎನ್ನುವುದಾದರೆ ಅದರಲ್ಲಿಯ ದೋಷಗಳನ್ನು ತಿದ್ದುವುದು ಒಳ್ಳೆಯದೋ ಅಥವಾ ಈ ವ್ಯವಸ್ಥೆಯನ್ನೇ ಕೈಬಿಟ್ಟು ಬೇರೆ ವ್ಯವಸ್ಥೆಯನ್ನು ರಚಿಸಿಕೊಳ್ಳುವುದು ಒಳ್ಳೆಯದೋ? ಬೇರೆ ವ್ಯವಸ್ಥೆಯನ್ನು ರಚಿಸಿಕೊಳ್ಳುವುದೇ ಒಳ್ಳೆಯದು ಎನ್ನುವುದಾದರೆ ಪರ್ಯಾಯ ವ್ಯವಸ್ಥೆಗಳಾವುವು?

ಮಾನವನ ಮೂಲಭೂತ ಸಮಾನತೆಯಲ್ಲಿ ನಂಬಿಕೆ ಇದ್ದವರಿಗೆ ಅನಧಿಪತ್ಯವಾದಿ

ವ್ಯವಸ್ಥೆಯೊಂದನ್ನು ಬಿಟ್ಟರೆ ಜನತಂತ್ರಕ್ಕೆ ಬೇರೆ ಯಾವ ಪರ್ಯಾಯವೂ ಇಲ್ಲ. ಆದರೆ ಜಾರ್ಜ ಓರವೆಲ್‌ನ 1984ಕ್ಕೆ ನಾವು ಅತ್ಯಂತ ಹತ್ತಿರವಿದ್ದರೂ ಕೂಡ ಅನಧಿಪತ್ಯವಾದಿ ವ್ಯವಸ್ಥೆಯನ್ನು ಗಂಭೀರವಾಗಿ ಒಂದು ಪರ್ಯಾಯವೆಂದು ಪರಿಗಣಿಸುವುದು ಕನಿಷ್ಠ ಪಕ್ಷ ನನ್ನ ತಲೆಮಾರಿಗಾದರೂ ಅಪ್ರಸ್ತುತವಾದದ್ದು ಎನ್ನಿಸುತ್ತದೆ. ಆದುದರಿಂದ ನಮಗೆ ಉಳಿಯುವುದು ಪ್ರಸ್ತುತ ವ್ಯವಸ್ಥೆಯ ದೋಷಗಳನ್ನು ಗುರುತಿಸಿ ಅವುಗಳನ್ನು ಸರಿಪಡಿಸಲು ಪ್ರಯತ್ನಿಸುವುದೊಂದೇ.

ಪ್ರತಿಸ್ಪರ್ಧೆಯ ರಾಜಕೀಯದ ಸಮಸ್ಯೆಗೆ ಮೂರು ಪರಿಹಾರಗಳನ್ನು ಸೂಚಿಸಲಾಗಿದೆ. ಹಲವರು ಎಲ್ಲಾ ರಾಜಕೀಯ ಪಕ್ಷಗಳನ್ನೂ ಕೈಬಿಟ್ಟು "ಪಕ್ಷರಹಿತ ಜನತಂತ್ರ"ವನ್ನು ಕಟ್ಟಬೇಕೆಂದು ಹೇಳಿದ್ದಾರೆ. ಆದರೆ ಮಾನವನಿಗೆ ಅಭಿಪ್ರಾಯ ಸ್ವಾತಂತ್ರ್ಯ ಇರುವವರೆಗೆ ಭಿನ್ನಾಭಿಪ್ರಾಯಗಳದ್ದೇ ಅಭಿವ್ಯಕ್ತಿಗಳಾದ ರಾಜಕೀಯ ಪಕ್ಷಗಳೂ ಇದ್ದೇ ಇರುತ್ತವೆ. ಆದುದರಿಂದ ಈ ಪರಿಹಾರ ಕೂಡ ಕಾರ್ಯಸಾಧ್ಯವಾದುದಲ್ಲ.

'ಹಿಂದುಳಿದ ಅರ್ಥ ವ್ಯವಸ್ಥೆಯ ರಾಜಕೀಯ ಒತ್ತಾಯಗಳು' ಎಂಬ ತಮ್ಮ ಒಂದು ಸಿದ್ಧಾಂತದಲ್ಲಿ ಭಾರತದ ಸಮಾಜವಾದಿ ನಾಯಕ ಅಶೋಕ ಮೆಹತಾ ಇನ್ನೊಂದು ಪರಿಹಾರವನ್ನು ಸೂಚಿಸುತ್ತಾರೆ. ಹಿಂದುಳಿದ ಅರ್ಥ ವ್ಯವಸ್ಥೆಯ ರಾಜಕೀಯ ಒತ್ತಾಯಗಳು ಸರಕಾರವನ್ನು ಬಲಪಡಿಸಬೇಕೆಂದೂ ವಿರೋಧವನ್ನು ಅಂಚಿಗೆ ತಳ್ಳಬೇಕೆಂದೂ ಆಗ್ರಹ ಪಡಿಸುತ್ತವೆ. ಇದರಿಂದಾಗಿ ಪ್ರತಿಸ್ಪರ್ಧೆಯ ತೀವ್ರತೆ ಮೊಂಡಾಗುತ್ತದೆ. ಹೀಗೆ ಮಾಡುವುದು ಅವಶ್ಯಕ. ಏಕೆಂದರೆ ಹಿಂದುಳಿದ ಅರ್ಥ ವ್ಯವಸ್ಥೆಯ ಪ್ರಗತಿಗೆ ಬೇಕಾದದ್ದು ಜನರ ನಡುವಣ ಸಹಕಾರ. ಪ್ರತಿಸ್ಪರ್ಧೆಯ ರಾಜಕೀಯ ಈ ಸಹಕಾರದ ಬುಗ್ಗೆಗಳನ್ನೇ ಹೊಸಕಿ ಹಾಕುತ್ತದೆ. ಒಟ್ಟಿಗೆ ಅಶೋಕ ಮೆಹತಾ ಪ್ರತಿಸ್ಪರ್ಧೆಯ ರಾಜಕೀಯದ ಬದಲು ಸಹಕಾರದ ರಾಜಕೀಯವನ್ನು ಪ್ರತಿಷ್ಠಾಪಿಸ ಬಯಸುತ್ತಾರೆ. ಈ ಸಿದ್ಧಾಂತದ ವಿರುದ್ಧ ಪರಸ್ಪರ ಸಂಬದ್ಧವಾದ ಎರಡು ವಾದಗಳನ್ನು ಮಂಡಿಸಬಹುದು. ಮೊದಲನೆಯದಾಗಿ ಸರಕಾರವನ್ನು ಬಲಪಡಿಸುವ ಹಾಗೂ ವಿರೋಧವನ್ನು ಅಂಚಿಗೆ ತಳ್ಳುವ ಯಾವುದೇ ಪ್ರಯತ್ನ ಈಗಿರುವ ಕೇಂದ್ರೀಕರಣದ ಪ್ರವೃತ್ತಿಯನ್ನು ಇನ್ನೂ ಬಲಗೊಳಿಸುತ್ತದೆ. ಇದರಿಂದಾಗಿ ಸರಕಾರ ಜನರ ಆಶೊತ್ತರಗಳಿಗೆ ಪ್ರತಿಸ್ಪಂದಿಸುವುದು ಮತ್ತೂ ಕಡಿಮೆಯಾಗುತ್ತದೆ. ಇದರ ಪರಿಣಾಮವಾಗಿ ಸರಕಾರವನ್ನು ಆರ್ಥಿಕ ಪ್ರಗತಿಯತ್ತ ಬಲವಂತಪಡಿಸುವ ಒಂದೇ ಒಂದು ಶಕ್ತಿ ಇಲ್ಲದಾಗಿ ದಬ್ಬಾಳಿಕೆಯ ಹೆಬ್ಬಾಗಿಲೇ ತೆಗೆದಂತಾಗುತ್ತದೆ. ಇದು ಸಹಕಾರದ ರಾಜಕೀಯ ಉದ್ದೇಶವನ್ನೇ ಸೋಲಿಸುತ್ತದೆ. ಸಹಕಾರದ ಈ ಪ್ರತಿಸ್ಪಂದನ ಹೀನತೆಯಿಂದಾಗಿ ಈ ವ್ಯವಸ್ಥೆಯ ಉಳಿವಿನ ದೃಷ್ಟಿಯಿಂದ ಸರಕಾರವನ್ನು ಎದುರುಗಟ್ಟಿಕೊಳ್ಳುವುದು ಆವಶ್ಯಕವಾಗುತ್ತದೆ.

ಲೋಕನಾಯಕರೆನಿಸಿಕೊಂಡ ಜಯಪ್ರಕಾಶ ನಾರಾಯಣರು ಈ ಸಮಸ್ಯೆಗೆ

ಇನ್ನೊಂದು ಪರಿಹಾರವನ್ನು ಸೂಚಿಸುತ್ತಾರೆ. ಇದನ್ನು ಬಹುಶಃ ಗತಿತಾರ್ಕಿಕ ಅಧಿಕಾರವಾದ ಎನ್ನಬಹುದು. ಪ್ರತಿಸ್ಪರ್ಧೆಯ ರಾಜಕೀಯ ಹಾಗೂ ಸಹಕಾರದ ರಾಜಕೀಯಗಳೆರಡನ್ನೂ ಅವರು ಬೆಸೆಯುತ್ತಾರೆ. ಜನರ ಆಶೋತ್ತರಗಳಿಗೆ ಪ್ರತಿಸ್ಪಂದಿಸದ ಹಾಗೂ ದಬ್ಬಾಳಿಕೆ ನಡೆಸುವ ಸಹಕಾರಗಳ ವಿರುದ್ಧ ಪ್ರತಿಸ್ಪರ್ಧೆಯ ರಾಜಕೀಯಕ್ಕೆ ಅವರು ಕರೆ ನೀಡುತ್ತಾರೆ. ಜನರ ಆಶೋತ್ತರಗಳಿಗೆ ಪ್ರತಿಸ್ಪಂದಿಸುವ ಸಹಕಾರದೊಂದಿಗೆ ಸಹಕಾರದ ರಾಜಕೀಯವನ್ನು ಬಯಸುತ್ತಾರೆ.

ರಾಜ್ಯಶಕ್ತಿಯ ರಾಕ್ಷಸೀ ಬೆಳವಣಿಗೆಯಿಂದಾಗಿ ಅದನ್ನು ವಿರೋಧಿಸುವುದು ಅವಶ್ಯಕವಾಗುತ್ತದೆ. ಇಂತಹ ರಾಕ್ಷಸೀ ರಾಜ್ಯಶಕ್ತಿಗಳ ಮೇಲೆ ನಿಯಂತ್ರಣ ಸಾಧಿಸಲು ಅಮೇರಿಕದ ಅರ್ಥ ಶಾಸ್ತ್ರಜ್ಞ ಜಾನ್ ಕೆನೆತ್ ಗಾಲಬ್ರೇಥ್ ಅವರು 'ಸಮತೋಲಕ ಶಕ್ತಿ' (countervailing forces) ಗಳ ಪ್ರಸ್ತಾಪ ಮಾಡುತ್ತಾರೆ. ರಾಜ್ಯಶಕ್ತಿಯ ವಿರುದ್ಧ ಸಮತೋಲಕ ಶಕ್ತಿಯಾಗಿ ಜನಶಕ್ತಿಯನ್ನು ಬೆಳೆಸಬೇಕೆಂದು ಜಯಪ್ರಕಾಶ ನಾರಾಯಣರು ಹೇಳುತ್ತಾರೆ. ಜನರ ಇಂತಹ ಒಗ್ಗಟ್ಟಿನ ಶಕ್ತಿಯೇ ರಾಜ್ಯಶಕ್ತಿಯ ವಿರುದ್ಧ ಸಮತೋಲಕ ಶಕ್ತಿಯಾಗಬಲ್ಲದು ಹಾಗೂ ಪ್ರತಿಸ್ಪರ್ಧೆಯ ರಾಜಕೀಯವನ್ನೇ ಆಗಲಿ ಸಹಕಾರದ ರಾಜಕೀಯವನ್ನೇ ಆಗಲಿ ಅರ್ಥಪೂರ್ಣ ವನ್ನಾಗಿ ಮಾಡಬಲ್ಲದು. ದಬ್ಬಾಳಿಕೆ ನಡೆಸುತ್ತಿರುವ ರಾಜ್ಯಶಕ್ತಿ ಹಾಗೂ ಜನ ಶಕ್ತಿಗಳ ನಡುವಣ ಸಂಘರ್ಷದ ಪರಿಣಾಮವಾಗಿ ಅಂತಹ ಸರಕಾರ ಕಿತ್ತು ಹಾಕಲ್ಪಟ್ಟು ಜನರ ಆಶೋತ್ತರಗಳಿಗೆ ಪ್ರತಿಸ್ಪಂದಿಸುವ ಸರಕಾರದ ರಚನೆ ಸಾಧ್ಯವಾಗುತ್ತದೆ. ಇಂತಹ ಪ್ರತಿಸ್ಪಂದಿಸುವ ಸರಕಾರದೊಂದಿಗೆ ಜನಶಕ್ತಿ ಆರ್ಥಿಕ ಪ್ರಗತಿಗಾಗಿ ಸಹಕರಿಸುತ್ತದೆ. ಪ್ರತಿಸ್ಪಂದಿಸುವ ಸರಕಾರ ಯಾವುದೇ ಕಾರಣಗಳಿಂದ ಮತ್ತೆ ದಬ್ಬಾಳಿಕೆ ನಡೆಸಲು ಪ್ರಾರಂಭಿಸಿದರೆ ಜನಶಕ್ತಿ ಮತ್ತೇ ಅದರೊಂದಿಗೆ ಸಂಘರ್ಷ ನಡೆಸುತ್ತದೆ. ಈ ಗತಿ–ತಾರ್ಕಿಕತೆ ರಾಜ್ಯ ವ್ಯವಸ್ಥೆಯನ್ನು ಸಮತೋಲನದಲ್ಲಿಡುವಲ್ಲಿ ಸಹಾಯಕವಾಗುತ್ತದೆ.

ನನಗೆ ಕಂಡು ಬಂದ ನಮ್ಮ ರಾಜಕೀಯ ವ್ಯವಸ್ಥೆಯ ಇನ್ನೊಂದು ದೋಷ, ರಾಜಕೀಯ ಅಧಿಕಾರದ ಕೇಂದ್ರೀಕರಣ ಎನ್ನುವುದಾದರೆ, ಅದರ ಪರಿಹಾರವೂ ತನ್ನಷ್ಟಕ್ಕೆ ತಾನೇ ಸ್ಪಷ್ಟವಾಗುತ್ತದೆ. ಅದೆಂದರೆ ತನ್ನ ಸಾಮಾಜಿಕ–ಆರ್ಥಿಕ ಮೊದಲಾದ ಎಲ್ಲಾ ಆಯಾಮಗಳನ್ನೂ ಒಳಗೊಂಡಿರುವ ರಾಜಕೀಯ ಅಧಿಕಾರದ ವಿಕೇಂದ್ರೀಕರಣ. ಮಹಾತ್ಮಾಗಾಂಧಿ ಮೊದಲಾದ ವ್ಯಕ್ತಿಗಳು, ಸಮಾಜವಾದಿಗಳು ಮೊದಲಾದ ರಾಜಕೀಯ ಗುಂಪುಗಳು ಜನತಂತ್ರವನ್ನು ಹೆಚ್ಚು ವಾಸ್ತವಿಕ ಹಾಗೂ ಪ್ರಭಾವಪೂರ್ಣವನ್ನಾಗಿ ಮಾಡಲು ವಿಕೇಂದ್ರೀಕರಣದ ಪರಿಹಾರವನ್ನು ಸೂಚಿಸಿವೆ. ಆದರೆ ದುರಾದೃಷ್ಟವಶಾತ್ ಭಾರತದ ಸಂವಿಧಾನದ ಪ್ರಕರಣ 40ರಲ್ಲಿ ಪಂಚಾಯಿತಿ ರಾಜ್ಯದ ಕಲ್ಪನೆಗೆ ಬರಿ ಮೇಲ್ನೋಟಕ್ಕೆ ಸಹಾನುಭೂತಿಯನ್ನು ತೋರಿಸಲಾಗಿದೆ. ಕೇಂದ್ರ ಹಾಗೂ ರಾಜ್ಯ ಸರಕಾರಗಳು ಕಾನೂನುಗಳನ್ನು ರಚಿಸುವುದರ ಮೂಲಕ

ಪಂಚಾಯಿತಿ ರಾಜ್ಯದ ಅಭಿವೃದ್ಧಿಗೆ ಸಹಾಯ ಮಾಡುತ್ತವೆ ಎಂಬ ಸಂವಿಧಾನ ರಚನಾಕಾರರ ನಂಬಿಕೆ ಸಂಪೂರ್ಣವಾಗಿ ಮಣ್ಣುಪಾಲಾಗಿದೆ. ಆದುದರಿಂದ ಈಗ ಹಳ್ಳಿಗಳು, ತಾಲ್ಲೂಕುಗಳು ಹಾಗೂ ಜಿಲ್ಲೆಗಳು ಮೊದಲಾದ ಎಲ್ಲಾ ಸ್ತರಗಳಲ್ಲೂ ವಿಕೇಂದ್ರೀಕರಣ ಸಾಧ್ಯವಾಗುವಂತೆ ಹೊಸ ಹಾಗೂ ಪ್ರಜ್ಞಾಪೂರ್ವಕ ಪ್ರಯತ್ನಗಳನ್ನು ಮಾಡುವುದು ಅವಶ್ಯಕವಾಗಿದೆ. ಈ ವಿಕೇಂದ್ರೀಕರಣ ಬರಿ ಕ್ಷೇತ್ರಕ್ಕೆ ಅಥವಾ ಭೂಮಿತಿಗೆ ಸಂಬಂಧಪಟ್ಟ ವಿಕೇಂದ್ರೀಕರಣ ಮಾತ್ರವೇ ಆಗಿರುವ ಅವಶ್ಯಕತೆ ಇಲ್ಲ. ಅದು ಔದ್ಯೋಗಿಕ ಜನತಂತ್ರ ಮೊದಲಾದ ಕಲ್ಪನೆಗಳಲ್ಲಿ ಅಂತರ್ನಿಹಿತವಾಗಿರುವ ವೃತ್ತಿಗಳನ್ನು ಆಧರಿಸಿ ವಿಕೇಂದ್ರೀಕರಣವೂ ಆಗಬೇಕು.

ರಾಜ್ಯಶಕ್ತಿಗೆ ಸಮತೋಲಕ ಶಕ್ತಿಯಾಗಿ ಜನಶಕ್ತಿಯ ಬೆಳವಣಿಗೆ ಹಾಗೂ ರಾಜಕೀಯ ಅಧಿಕಾರದ ಸಂಪೂರ್ಣ ವಿಕೇಂದ್ರೀಕರಣ–ಪರಸ್ಪರ ಪೂರಕವಾಗಿರುವ ಇವೆರಡೂ ಪರಿಹಾರಗಳು ಮಾತ್ರ ನಮ್ಮ ದೇಶದ ರಾಜಕೀಯ ವ್ಯವಸ್ಥೆಯನ್ನು ಭದ್ರಪಡಿಸಬಲ್ಲವು. ಜನತಂತ್ರದಲ್ಲಿ ತನಗಿರುವ ಹಿತಾಸಕ್ತಿಯನ್ನು ಪ್ರತಿಯೊಬ್ಬನೂ ಅರಿತುಕೊಂಡಿರುವ ಇಂತಹ ಸುಭದ್ರ ರಾಜಕೀಯ ವ್ಯವಸ್ಥೆ ಮಾತ್ರ ಇಂದು ಮೂರನೆಯ ಜಗತ್ತಿನಲ್ಲಿ ತೀವ್ರವಾಗಿ ಮೂಡಿಬರುತ್ತಿರುವ ಸರ್ವಾಧಿಕಾರದ ಗಂಡಾಂತರವನ್ನು ಎದುರಿಸಬಲ್ಲದು.

ಕೊನೆಯದಾಗಿ, ಸಂಸದೀಯ ಜನತಂತ್ರ ಯಾವುದಾದರೂ ಹಿಂದುಳಿದ ದೇಶದಲ್ಲಿ ಆರ್ಥಿಕ ಪ್ರಗತಿಯನ್ನು ಸಾಧಿಸುವಲ್ಲಿ ಸಹಾಯಕವಾಗಿದೆಯೇ? ಸಂಸದೀಯ ಜನತಾಂತ್ರಿಕ ವ್ಯವಸ್ಥೆಯುಳ್ಳ ಯಾವುದೇ ಹಿಂದುಳಿದ ದೇಶ ಗಮನಾರ್ಹ ಆರ್ಥಿಕ ಪ್ರಗತಿಯನ್ನು ಸಾಧಿಸಿಲ್ಲ ಎನ್ನುವುದು ಒಪ್ಪಿಕೊಳ್ಳಲೇ ಬೇಕಾದಂತಹ ಮಾತು. ಆದರೂ ಸರ್ವಾಧಿಕಾರಿಗಳ ತುಳಿತಕ್ಕೆ ನರಳುತ್ತಿರುವ ಹಿಂದುಳಿದ ದೇಶಗಳಿಗಿಂತ ಸಂಸದೀಯ ಜನತಾಂತ್ರಿಕ ವ್ಯವಸ್ಥೆ ಇರುವ ದೇಶಗಳು ಹೆಚ್ಚಿನ ಪ್ರಗತಿಯನ್ನು ಸಾಧಿಸಿವೆ ಎನ್ನುವುದೂ ಕೂಡ ಒಪ್ಪಲೇಬೇಕಾದ ಮಾತು. ಕನಿಷ್ಟಪಕ್ಷ ಸಂಸದೀಯ ಜನತಂತ್ರದಲ್ಲಿ ತಮಗೆ ಬೇಕಾದ ದಿಕ್ಕಿನಲ್ಲಿ ಮುಂದುವರಿಯಲು ಜನತೆಗಿರುವ ಸ್ವಾತಂತ್ರ್ಯದ ವಿಕಲ್ಪ ಉಳಿದುಕೊಳ್ಳುತ್ತದೆ. ಆದರೆ ಸರ್ವಾಧಿಕಾರ ಆ ವಿಕಲ್ಪವನ್ನೂ ಸಂಪೂರ್ಣವಾಗಿ ಹೊಸಕಿ ಹಾಕುತ್ತದೆ ಎನ್ನುವುದನ್ನು ಮರೆಯಲಾಗದು.

ಕೊನೆಗೊಂದು ಎಚ್ಚರಿಕೆ ಅವಶ್ಯಕ. ಜನತಂತ್ರ ಮಾನವನ ರಾಜಕೀಯ ಸಮಾನತೆಗೆ ಅಭಿವ್ಯಕ್ತಿ ನೀಡುತ್ತದೆ. ಆದರೆ ಇದಕ್ಕೊಂದು ಆರ್ಥಿಕ ಅರ್ಥವನ್ನೂ ನೀಡದೇ ಹೋದಲ್ಲಿ, ಮಾನವನ ಆರ್ಥಿಕ ಸಮಾನತೆಗೂ ದನಿಗೊಡದೇ ಹೋದಲ್ಲಿ ಸಂಪೂರ್ಣ ಸಾಮಾಜಿಕ ವ್ಯವಸ್ಥೆ ಹಾಗೂ ಅದರ ಮೇಲೆಯೇ ನಿಂತಿರುವ ರಾಜಕೀಯ ವ್ಯವಸ್ಥೆಗಳು ಕುಸಿದು ಹೋಗುವ ಗಂಡಾಂತರಕ್ಕೆ ಒಳಗಾಗುತ್ತವೆ ಎನ್ನುವುದನ್ನೂ ನಾವು ಸದಾ ನೆನಪಿಡಬೇಕು.

# ಯಕ್ಷಗಾನ ಮತ್ತು ಶಿವರಾಮ ಕಾರಂತರು ಇತ್ಯಾದಿ

o

ಕ. ವೆಂ. ರಾಜಗೋಪಾಲ

ಡಾ|| ಶಿವರಾಮ ಕಾರಂತರು ಯಕ್ಷಗಾನ ತರಪೇತಿ ಶಿಬಿರದಲ್ಲಿ (ತಾ|| 5 ಜನವರಿಯಿಂದ 17 ಜನವರಿ 1982ರ ವರೆಗೆ) ಬಯಲಾಟದ ಪಾತ್ರಗಳು ಅಭಿನಯಿಸುವ ರೀತಿ ನೀತಿಯನ್ನು ತೋರಿಸಿಕೊಡುತ್ತಿದ್ದರು. ಭಾಗವತರು ಮತ್ತು ಹಿಮ್ಮೇಳದಲ್ಲಿ ಆಗ ಮದ್ದಳೆ, ತಾಳ, ಶ್ರುತಿ ಮತ್ತು ಪಿಟೀಲುಗಳನ್ನು ಬಳಸಲಾಗುತ್ತಿತ್ತು. ಅವರು ಹೇಳಿದ ಅವರು ಹೇಳಿದ ಸಂದರ್ಭವನ್ನು ಭಾಗವತರು ಎತ್ತಿಕೊಂಡು ಹಾಡನ್ನು ಪ್ರಾರಂಭಿಸಿದರೆ ಕಾರಂತರು ಅದರ ಅಭಿನಯವನ್ನು ಮಾಡಿ ತೋರುತ್ತಿದ್ದರು. ಇದರಿಂದ ನಿಶ್ಚಿತವಾದ ರೂಪವೊಂದು ಅಭಿನಯದಲ್ಲಿ ಮೂಡುತ್ತಿತ್ತು. ಸಂಪ್ರದಾಯದ ತಿದ್ದುಪಡಿಯಂತೆ ಕಾಣುತ್ತಿದ್ದ ಅವರ ರೀತಿ ನೀತಿಯಲ್ಲಿ ನ್ಯಾಯವಾಗಿ 'ಯಕ್ಷಗಾನ ಸಂಪ್ರದಾಯವು' ಸಡಿಲವಾಗದ ರೀತಿಯಲ್ಲಿ ಬೆಳೆಯುವಂತೆ ಮಾಡಲಾಗಿತ್ತು. ಆದರೆ ನಟರಿಗೆ ಪೂರ್ಣ ಸ್ವಾತಂತ್ರ್ಯವನ್ನು ಕೊಡುತ್ತಿರಲಿಲ್ಲ. ಆಧುನಿಕ ನಾಟಕವೊಂದನ್ನು ನೃತ್ಯದ ನೆರವಿನಿಂದ ಪ್ರಯೋಗಿಸಿದಾಗ ಒಂದು ಖಚಿತವಾದ ರೀತಿಯು ಬೇಕಿಗೆ ಬರುವಂತೆಯೇ ಕಾರಂತರ ಪ್ರಯೋಗವೂ ಆಗುತ್ತಿತ್ತೆನ್ನಬಹುದು. ಆದರೆ ಒಬ್ಬ ಯಕ್ಷಗಾನ ಪಾತ್ರದಾರಿ ಸಾಂಪ್ರದಾಯಿಕವಾಗಿ ಅನುಭವಿಸುತ್ತಿದ್ದ ಸ್ವಾತಂತ್ರ್ಯವನ್ನು ಕಾರಂತರು ನಿಯಂತ್ರಿಸಿದಂತಾಗಿದ್ದ ಕಾರಣ, ಒಟ್ಟಿನಲ್ಲಿ ಕಾರಂತರ ನಿರ್ದೇಶನವು ಹೊಸ ಪ್ರಯೋಗವಾಗುತ್ತಿತ್ತು. ಈ ಹಿನ್ನೆಲೆಯಲ್ಲಿ ಕಳೆದ ಶಿಬಿರವನ್ನು ಪರಿಶೀಲಿಸಿದಾಗ ಬೇರೆಯವರು ಅಂದರೆ ಯಕ್ಷಗಾನದ ಪ್ರೇಕ್ಷಕವರ್ಗಕ್ಕೆ ಸೇರದವರು ಪಾತ್ರಧಾರಿಗಳಾಗಲು ಒಳ್ಳೆಯ ಮಾರ್ಗದರ್ಶನವಾಯಿತು.

ಯಕ್ಷಗಾನ ಬಯಲಾಟಕ್ಕೆ ಆದರದೇ ಪ್ರೇಕ್ಷಕ ವರ್ಗವಿದೆ. ದ ಕನ್ನಡ ಜಿಲ್ಲೆಯಲ್ಲಿ ತುಳು ಮಾತಾಡುವ ಜನತೆ ಮತ್ತು ಉ. ಕನ್ನಡ ಜಿಲ್ಲೆಯಲ್ಲಿ ಕನ್ನಡ ಮಾತಾಡುವ ಮಂದಿ. ಇವೆರಡು ಬಣಗಳೂ 'ತೆಂಕುತಿಟ್ಟು' ಮತ್ತು 'ಬಡಗುತಿಟ್ಟು' ಸಂಪ್ರದಾಯಗಳಿಗೆ ಆಧಾರವಾಗಿವೆ. ಈ ಎರಡೂ ಲೋಕಗಳಿಂದ ಹೊರಕ್ಕೆ ಯಕ್ಷಗಾನವು ಹರಿಯಲಾರದು. ಏಕೆಂದರೆ ಅಲ್ಲಿ ಪ್ರೇಕ್ಷಕರು ಭೇಟಿಯಾಗುತ್ತಾರೆ. ಯಕ್ಷಗಾನವು ನೃತ್ಯ ಸಂಗೀತಗಳ ಬಳಕೆಗೆ ಅನುಕೂಲವಾದ ಒಂದು 'ರಿಚ್‌ಫಾರಂ' ಆಗಿರುವುದರಿಂದ ಅಲ್ಲದೆ ಅದರ ಪಾತ್ರಗಳಿಗೆ ನಿಶ್ಚಿತವಾದ ಅಲಂಕಾರಗಳ ವೈಭವವೂ ಸೇರಿಸುವುದರಿಂದ ಯಾವುದೇ ಅಂಶದಲ್ಲಿ ಆದು ತನ್ನ ಪ್ರೇಕ್ಷಕರ ರಿಚುಯಲ್ (ಧಾರ್ಮಿಕ ಕ್ರಿಯೆ) ಗಳಿಗೆ ಸೇರಿಹೋಗಿರುವುದರಿಂದ ಬೇರೆಯವರಿಗೆ ಅನುಕರಣೆಯ ರೂಪದಲ್ಲಿ

ಮಾತ್ರ ನಿಲ್ಲಬಲ್ಲದು. ಉದಾಹರಣೆಗೆ ಬಣ್ಣದ ವೇಷಕ್ಕೂ, ಇಂದಿಗೂ ಆಧುನಿಕ ಶಿಕ್ಷಣವಿಲ್ಲದವರು ಪಾತ್ರಧಾರಿಗಳಾಗಿದ್ದಾರೆ. ಅವರ 'ಗತ್ತು' ಕಲಿತವರಿಗೂ ಬರಲಾರದು. ಕಾರಂತರು ಈ ಪಾತ್ರದ ಬಗೆಯನ್ನು ನಿಯಂತ್ರಿಸಿದ ಕಾರಣ ಅದು ಭರತನಾಟ್ಯದ ಅಭಿನಯವನ್ನು ನೆನಪಿಗೆ ತರುವ (ಆದರೂ ಬೇರೆಯಾದ) ಒಂದು ಸುಸಂಸ್ಕೃತರೂಪವಾಗಿಬಿಟ್ಟಿದೆ. ಅಂದರೆ ಅದರ ಕೆಚ್ಚು-ಆವೇಶಗಳು ಸಪ್ಪೆಯಾಗಿ ಬಿಟ್ಟಿವೆ. ಅಂದರೆ ಕಾರಂತರು ಸಾಧಿಸಿದ ಪ್ರಯೋಗಗಳಲ್ಲಿ ಕಾರಂತರ ಜಾಣ್ಮೆ (ಹೋಲಿಕೆಯಿಂದ)ಯು ಒಡಮೂಡುವ ಕಾರಣ ಅದರಲ್ಲಿ ಒಂದು ಸುಂದರರೂಪಿನ ರೂಪಕವು ಒಡಮೂಡುತ್ತದೆ.

ಸದ್ಯಕ್ಕೆ ಕಾರಂತರ ಪ್ರಯೋಗಗಳಲ್ಲಿ 'ವೀರ ಅಭಿಮನ್ಯು' ಒಂದು ಸುಂದರ ಭ್ರಾಮಕ (fantacy) ವಾಗಿದೆ. ಅವರ ಮೊದಲಿನಿಂದ ಬಾಲಗೋಪಾಲರು ಮೊದಲಾಗಿ ತೋರುವ ಸುತ್ತುಗಳು ಪೀಠಿಕೆಯಾದಂತೆ ಉಳಿದ ಪಾತ್ರಗಳಿಗೂ ಆಧಾರವಾಗಿ ಇಡೀ ಬಯಲಾಟವು ಸುಂದರವಾದ ಸುತ್ತುಗಳಿಂದ ಆಧಾರಿತವಾಗಿ ರೂಪಗೊಳ್ಳುತ್ತ ಶೋಭಿಸುತ್ತದೆ. ಇಲ್ಲಿ ಕಾರಂತರು ಸಾಂಪ್ರದಾಯಿಕವಾದ ರೀತಿ ನೀತಿಯನ್ನೇ ನಿಯಂತ್ರಿಸಿ ನಿರ್ದೇಶಿಸಿರುವ ಕಾರಣ ಪಾತ್ರಧಾರಿಗಳು ಅಂತಹ ನಿಯಂತ್ರಣಕ್ಕೆ ಬದ್ಧರಾಗಲೇ ಬೇಕಾಗುತ್ತದೆ. ಅನಿಯಂತ್ರಿಕವಾಗಿ ಅನೇಕ ವೇಳೆ ಬೇಸರ ತರುವ ಸಡಿಲ ರೀತಿಯಲ್ಲಿ ಬೆಳೆಯುತ್ತಿದ್ದ ಯಕ್ಷಗಾನ ಬಯಲಾಟಗಳನ್ನು ಕಾರಂತರು ನಿಯಂತ್ರಿಸಿದರು ಎನ್ನಬಹುದು.

ಅವರು ಒಮ್ಮೆ 'ನಾನು ಸಾಂಪ್ರದಾಯಿಕ ಭಾಗವತರು ಮತ್ತು ಪಾತ್ರಧಾರಿಗಳನ್ನೇ ಬಳಸಿದರೂ ಸಂಪ್ರದಾಯವನ್ನು (Tradition) ಬಿಟ್ಟಿದ್ದೇನೆಂಬ ಆಕ್ಷೇಪವನ್ನು ಎಲ್ಲಾ ವಿಮರ್ಶಕರೂ ಆಡುತ್ತಿದ್ದಾರೆ ನೋಡಿ' ಎಂದದ್ದುಂಟು. ವಾಸ್ತವವಾಗಿ ಸಾಂಪ್ರದಾಯಿಕ ಯಕ್ಷಗಾನ ಬಯಲಾಟವು ಕಟ್ಟುಹರಿದ ಪಂಜಿನಂತೆ ಆಗುತ್ತಿದ್ದುದುಂಟು, ನಿಜ. ಅದರ neatnessಗೆ ಭಾಗವತರು ಗಮನ ಕೊಡುತ್ತಿರಲಿಲ್ಲ. ಏಕೆಂದರೆ ಅಭಿನಯವು ಪಾತ್ರಧಾರಿಗಳ ಹತೋಟಿಯಲ್ಲಿತ್ತು. ಅದನ್ನು ಪಾತ್ರಧಾರಿಗಳು ಮುಂದಿನ ತಲೆಮಾರಿಗೆ ತಾವೇ ಅಭ್ಯಾಸಮಾಡಿಸಿ ಅದರ ಸ್ವಾತಂತ್ರ್ಯವನ್ನೂ ರಕ್ಷಿಸಿಕೊಡುತ್ತಿದ್ದರು. ಇದರಿಂದ ಯಕ್ಷಗಾನವನ್ನು ಒಬ್ಬೊಬ್ಬರೂ ಸ್ವಂತ ಅಧ್ಯಾಪಕರಿಂದಲೇ ಕಲಿಯುವಂತಾಗಿದ್ದಿತು. ಈಗ ಎಲ್ಲಾ ಪಾತ್ರಧಾರಿಗಳಿಗೂ ಭಾಗವತರಿಗೂ ಅವಕಾಶ ತಪ್ಪಿಸಿ ಕಾರಂತರೊಬ್ಬರೇ ಭಾಗವತರೆನ್ನಬಹುದಾದ ಸ್ಥಿತಿ ಒದಗಿಬಂತು. ಅದು ಅವರ 'ಯಕ್ಷರಂಗ ಶೈಲಿ'ಯ ಪ್ರಯೋಗಗಳಲ್ಲಿ ನಿಷ್ಠುರವಾದ ಕಾರಣ ಅವರೇ ಬಿಟ್ಟುಕೊಟ್ಟಿದ್ದಾರೆ. ಇನ್ನು ಮುಂದೆ ಯಾವುದೇ ಭಾಗವತರು ತಮ್ಮ ಪಾತ್ರಗಳಿಗೆ ಒಂದು 'ಹಾಳತನ' ಅಥವಾ ನಿರ್ದೇಶನವನ್ನು ಸಾಧಿಸಲು ಬೇಕಾದ ತಿಳಿವಳಿಕೆಯನ್ನು ಮಾತ್ರ ನೀಡಲು ಪ್ರಯತ್ನಿಸಿದ್ದಾರೆ. ಕಾರಂತರಿಗೆ ಯಕ್ಷಗಾನವು ಕೇವಲ ತಮ್ಮ ಹೆಸರಿಗೆ ಅಂಟಿದ ರೀತಿಯಾಗಬೇಕಾಗಿರುವುದಿಲ್ಲ. ಇವನ್ನು ಅವರ

(ಮೇಲಿನ) ಮಾತಿನಿಂದಲೇ ಗುರುತಿಸಬಹುದು. ಕಳೆದ ಶಿಬಿರದ ನಿರ್ದೇಶಕರಾದ ಕು. ಶಿ. ಹರಿದಾಸಭಟ್ಟರಿಗೆ 'ಕಾರಂತರ ಮಹಿಮೆ' ಮುಖ್ಯ.

ಏಕೆಂದರೆ ಅವರು ಯಕ್ಷಗಾನದ ಭಾಗವತರಲ್ಲ, ಪಾತ್ರಧಾರಿಗಳೂ ಅಲ್ಲ. ಒಂದು ಕಂಪನಿಯ ನಿರ್ಮಾತೃಗಳೆಂದು ಬೇಕಾದರೆ ಹೇಳಬಹುದು. ಆದರೆ ಕಾರಂತರು ಆಧುನಿಕ ಅರ್ಥದಲ್ಲಿ ಒಬ್ಬ ನಿಜವಾದ 'ನಿರ್ದೇಶಕರು'. ಇಲ್ಲಿ ಕಾರಂತರಿಗೆ ದೊರಕಿರುವ ಸ್ವಾತಂತ್ರ್ಯ ಮುಖ್ಯವಾಗಿ ಇದನ್ನು ಶಂಭುಹೆಗ್ಗಡೆಯಂತಹ ಯಕ್ಷಗಾನ ಪಟುಗಳು ತಾವೂ ಕಂಡುಕೊಂಡಿದ್ದಾರೆ ಎನ್ನಬಹುದು. ಇದರಿಂದಾಗಿ ಯಕ್ಷಗಾನ ಬಯಲಾಟದಲ್ಲಿ ಭಾಗವತರು 'ನಿರ್ದೇಶಕ'ರಾಗುವ ಒಂದು ವಿಶೇಷ ಅಂಶ ಒಡಮೂಡಿದಂತಾಗಿದೆ. ಬೇರೆಯವರೂ ಶಂಭುಹೆಗ್ಗಡೆಯವರನ್ನು ಅರ್ಥಮಾಡಿಕೊಂಡು ನಡೆದುಕೊಳ್ಳಬಹುದು.

ಧರ್ಮಸ್ಥಳದ ಮೇಳದಲ್ಲಿ ಹೆಚ್ಚು ಹಣವನ್ನು ಪಡೆಯಲು ಯಕ್ಷಗಾನದ ಪ್ರಸಿದ್ಧ ಪಾತ್ರಧಾರಿಗಳು ಸೇರಲು ಅವಕಾಶವಾದುದು ಹೀಗೆ. ಆದರೂ ಅಲ್ಲಿಯ ಭಾಗವತರಿಗೆ ಸ್ವಾತಂತ್ರ್ಯವಿರುವುದಿಲ್ಲವಾಗಿ ಪಾತ್ರಗಳ ಅರ್ಥವಂತಿಗೆ ಕೂಡ ಹತೋಟಿಯಲ್ಲಿರುವುದಿಲ್ಲ. ಈಚೆಗೆ ನಾನು ಅವರ 'ವಿದ್ಯುನ್ಮತಿ ಕಲ್ಯಾಣ'ವನ್ನು ನೋಡಿದಾಗ ಪ್ರಸಿದ್ಧ ಅರ್ಥಗಾರಿಯೊಬ್ಬರು ಜಯಂತನ ಪಾತ್ರ ವಹಿಸಿದ್ದರು. ಅವರ ಕಣ್ಣು 'ಮೆಳ್ಳ'ವಾಗಿದ್ದ ಕಾರಣ ಅದು ಯೋಗ್ಯವೇಷವಾಗಿರಲಿಲ್ಲ. ಅಲ್ಲದೆ ವಿದ್ಯುನ್ಮತಿಯು ಉಪಾಯದಿಂದ ಆ ಜಯಂತನ 'ಪ್ರೇಮದ ಬಲವಂತ'ವನ್ನು ನಿವಾರಿಸಿಕೊಳ್ಳಬೇಕಾಗಿದ್ದಾಗ ಆಕೆಯೂ ಆತನಲ್ಲಿ ಅನುರಕ್ತಳಂತೆ (ಕೃತಕತೆಯಿಲ್ಲದಂತೆ) ಪ್ರಾಮಾಣಿಕವಾದ ರೀತಿಯಲ್ಲಿ ನಡೆದುಕೊಂಡಳು(ನು). ಕಥೆ ಬೆಳೆದಂತೆ ಆಕೆಯು ನಿಜಕ್ಕೂ ಲವನ ಮಗನಲ್ಲಿ ಮೋಹಪರವಶಳಾಗುತ್ತಾಳೆ(ನೆ). ಆದರೆ ಆ ಸಮಯ ಬಂದಾಗ ಪ್ರೇಕ್ಷಕರೊಬ್ಬರು ಗಟ್ಟಿಯಾಗಿ Second hand ಎಂದು ಆಕೆಯ ಸಂದರ್ಭವನ್ನು ಕೂಗಿ ಕರೆದುಬಿಟ್ಟರು. ಇದನ್ನು ಭಾಗವತರು ನಿಯಂತ್ರಿಸಲು ಅವರಾಗಲೇ ಬೇರೆಯವರಾಗಿದ್ದರು (!) ಮಾಲಿಕರಿಗೆ ಇವೆರಡೂ ಕೊರತೆಗಳು ತಿಳಿದಂತಿರಲಿಲ್ಲ. ಏಕೆಂದರೆ ವೀರೇಂದ್ರಹೆಗ್ಗಡೆಯವರು ಕೇವಲ ಧರ್ಮಾಧಿಕಾರಿಗಳು ಮತ್ತು ಧರ್ಮ ನಿರ್ದೇಶಕರು ಅಷ್ಟೆ. ಇದರಿಂದ ಯಕ್ಷಗಾನ ಬಯಲಾಟದಲ್ಲಿ ಸುಧಾರಣೆಯಾಗಬೇಕಾದರೆ ಭಾಗವತರನ್ನು ನಿರ್ದೇಶಿಸುವ ಒಬ್ಬ ನಿರ್ದೇಶಕನೇ ಬೇಕಾಗುತ್ತದೆ. (ಇದು ಕಾರಂತರ ಪ್ರಯೋಗಗಳದ್ದು)

ಧರ್ಮಸ್ಥಳದ ಮೇಳದಲ್ಲಿ ವ್ಯವಸ್ಥೆ ಉತ್ತಮವಾಗಿದೆ. ಸಾಂಪ್ರದಾಯಿಕ ಚೌಕಟ್ಟನ್ನು ಅವರು ಕಟ್ಟುನಿಟ್ಟಾಗಿ ರಕ್ಷಿಸಿಕೊಂಡಿದ್ದಾರೆ. ಅವರ ಪಾತ್ರಗಳು 'ಚಾರಿ'ಯನ್ನು ಬಳಸುವುದರಲ್ಲಿ ನಿಸ್ಸೀಮತೆಯನ್ನು ತೋರುತ್ತಾರೆ. ಒಂದು ಕಾಲಿನ ಮೇಲೆ ಗರ್ರನೆ ತಿರುಗಿ ಪ್ರೇಕ್ಷಕರಲ್ಲಿ ಅಚ್ಚರಿಯನ್ನುಂಟುಮಾಡುವುದರಲ್ಲಿ ಅವರ ಉಡಿಗೆಯೂ ನೆರವಾಗುತ್ತದೆ. ಸಾಮಾನ್ಯವಾಗಿ ಮುದ್ದೆಮುದ್ದೆಯಾಗಿ ತೋರುವ ಉಡಿಗೆಗೆ 'ಚಾರಿ'ಗಳಲ್ಲಿ ಜೀವ ಬಂದಂತಾಗುತ್ತದೆ. ಎಡನೆಯ ವಿಶೇಷ ಗುಣವೆಂದರೆ

ಬಣ್ಣದ ವೇಷ. ಇದರಲ್ಲಿ ಚಂದ್ರಗಿರಿ ಅಂಬು ಎಂಬ ನಿರಕ್ಷರ ಕಲಾವಿದ ತೋರುವ ಆ ವೇಷವು ಹೆಮ್ಮೆ ಪಡುವಂತಹುದು. ರಾಕ್ಷಸನ ವೇಷಕ್ಕೆ ಇಂತಹ ವ್ಯಕ್ತಿತ್ವವನ್ನು ತುಂಬುವುದರಲ್ಲಿ ಆತ ಒಂದು ಹಳೆಯ ಸಂಪ್ರದಾಯವನ್ನು ರಕ್ಷಿಸಿಕೊಂಡು ಬಂದಿದ್ದಾರೆ. (ಕಾರಂತರ ರಾಕ್ಷಸ ಪಾತ್ರಗಳು ಇಲ್ಲಿ ಹೋಲಿಕೆಗೆ ಮೃದುವಾಗುತ್ತವೆ.)

ಇಡಗುಂಜಿಯ ಮೇಳದಲ್ಲಿ ಪರಿಸ್ಥಿತಿ ಬೇರೆಯದು. ಅಲ್ಲಿಯ ಶಂಭುಹೆಗ್ಗಡೆಯವರು ಇದರ ನಿರ್ದೇಶಕರಾಗಿದ್ದಾರೆ. ಇವರು ಸ್ವತಃ 'ಕೋರಿಯೋಗ್ರಫಿ'ಯಲ್ಲಿ ಅಭ್ಯಾಸ ಮಾಡಿದವರಾದ ಕಾರಣ ತಮ್ಮ ಬಯಲಾಟಗಳಿಗೆ ಅದನ್ನು ಬಳಸುತ್ತಾರೆ.

ಇಡಗುಂಜಿಯ ಮೇಳವನ್ನು ಗಮನಿಸುವವರಿಗೆ ಮಾತಿನ ವೈಖರಿ ಮತ್ತು ಹೆಚ್ಚುಗಾರಿಕೆಗಳು ಮುಟ್ಟವಾಗುತ್ತವೆ. ಇಲ್ಲಿಯೂ ಕಾರಂತರ ಪ್ರಭಾವ ಕಂಡು ಬರುತ್ತದೆ. ಆದರೆ ಶಂಭು ಹೆಗ್ಗಡೆ ಮತ್ತು ಚಿಟ್ಟಾಣಿಯಂತಹ ಕಲಾವಿದರು ಅಭಿನಯಿಸುವ ರೀತಿ ನೀತಿಯನ್ನು ಉಳಿದ ಪಾತ್ರಗಳೂ ಅನುಕರಿಸುವುದುಂಟು. ಅಂದು ನಾನು ನೋಡಿದ ಬಯಲಾಟದಲ್ಲಿ ಕಾರ್ತವೀರ್ಯ–ಪ್ರಮೀಳೆಯ ದರ್ಬಾರು ಮತ್ತು ಬಭ್ರುವಾಹನ ಕಾಳಗ–ಇವು ಮೂರು ಒಂದು ರಾತ್ರಿಯ ಪ್ರದರ್ಶನವಾಗಿದ್ದುದುಂಟು. ಹಾಸ್ಯಗಾರ ತೋರಿದ ಜಾಣ್ಮೆ (ಕುಂಚಾಲು ರಾಮಕೃಷ್ಣ ?) ಮರೆಯಲಾಗದಂಥದು. ಕಾರ್ತವೀರ್ಯನಾಗಿ ಶಂಭು ಹೆಗ್ಗಡೆ ತಮ್ಮ ದೃಶ್ಯದ ಅದರಲ್ಲೂ ಜಲಕೇಳಿಯ ಸಂದರ್ಭವನ್ನು ತುಂಬ ಜಾಣ್ಮೆಯಿಂದ ಕಲಾತ್ಮಕವಾಗಿಸಿದ್ದರು. ನಾನು ಅವರು ಶಿಶುಪಾಲನಾದಾಗಿನ ಸಂದರ್ಭವನ್ನು ಈಗ್ಗೆ ಒಂದು ವರ್ಷದ ಹಿಂದೆ ನೋಡಿದ್ದೆ. ಈಗಲೂ ಅದರ ಅಂಶಗಳು ಕಾರ್ತವೀರ್ಯನಾದಾಗಲೂ ಕಂಡುಬಂದುವು. ಮುಖವರ್ಣಿಕೆಯ ಹೋಲಿಕೆಯಲ್ಲದೆ ಅಭಿನಯದಲ್ಲಿ ಕಥಕ್ಕಳಿಯ ಕೃಷ್ಣನ ಕುಡಿನೋಟ ಮತ್ತು ಭ್ರೂಭಂಗಿಗಳು ಮಿಂಚುತ್ತಿದ್ದವು. ಆದರೂ ನದಿಯ ಕಲ್ಪನೆಯು ಪ್ರೇಕ್ಷಕರಿಗೆ ಮೂಡುವಂತೆ ಮಾತಿನಿಂದ ಪ್ರಾರಂಭಿಸಿ ತನ್ನ ರಾಣಿವಾಸದ ಸತಿಯರ ಜೊತೆಗೂಡಿ ತಾನು ಭ್ರಮರವೆಂಬಂತೆಯೂ ಅವರು ಅರಳಿದ ತಾವರೆಗಳೆಂಬಂತೆಯೂ ಸನ್ನಿವೇಶವನ್ನು ಚಿತ್ರಿಸಿದ ಬಗೆ ಆಶ್ಚರ್ಯಕರವಾಗಿತ್ತು. ಮುಂದೆ ಪ್ರಮೀಳೆಯ–ಕಸೆವೇಷ–ಇದು ಯಕ್ಷಗಾನ ಸಂಪ್ರದಾಯದಲ್ಲಿ ಒಂದು ವಿಶಿಷ್ಟವಾದುದು. ಹೆಂಗಸೊಬ್ಬಳು ರಣರಂಗದಲ್ಲಿ ಕಾಳಗವನ್ನು ಕೊಡುವ ಸಂದರ್ಭಕ್ಕೆ ಇದು ಅಳವಟ್ಟಂತೆ ಕಾಣುತ್ತದೆ. ವೀರಗಾಸೆ ಮತ್ತು ಕತ್ತರಿಯಾಗಿ ಬೆನ್ನು ಹಾಗೂ ಎದೆಗಳ ಮೇಲೆ ಹಾದು ಮುಂಡಿಯವರೆಗೆ ಬರುವ ಎರಡು ಪಟ್ಟಿಗಳು ಪಾತ್ರಕ್ಕೆ ವಿಶೇಷತೆಯನ್ನು ತಂದುಕೊಡುತ್ತವೆ. ಸ್ತ್ರೀಯಾದರೂ ಬಿಲ್ಲುಬಾಣಗಳನ್ನು ಹಿಡಿದು ವೀರಾಲಾಪದಲ್ಲಿ ತೊಡಗುವ ಈ ಪಾತ್ರವು ಗಂಡಿಗೆ ಒಂದು ಸವಾಲಾಗಿ ನಿಲ್ಲುತ್ತದೆ. ಆದುದರಿಂದ ಇದೊಂದು ಉಳಿಯಬೇಕಾದ ಸಾಂಪ್ರದಾಯಿಕ ಅಲಂಕಾರವೆನ್ನುವುದಾದರೆ ಸರಿ.

ಈ ಮೇಳದಲ್ಲಿ ಹಾಸ್ಯಗಾರನ ನಿಸ್ಸೀಮತೆ ಮತ್ತೊಂದು ಆಕರ್ಷಣೆಯೇ ಆಗಿದೆ. ಆ ಕುಣಿತ ಮತ್ತು ಮಾತು ನೆನಪಿನಲ್ಲಿ ಉಳಿದುಬಿಡುತ್ತವೆ. (ಕಾರಂತರು

ಇದಕ್ಕೆ ಒಪ್ಪುವಂತೆ ತೋರುವುದಿಲ್ಲ. ಕುಣಿತವೂ ಅವರಿಗೆ ಮುಖ್ಯವಾಗಲಾರದು) ಯಕ್ಷಗಾನದ ಬಯಲಾಟವನ್ನು ಒಂದು ರೀತಿಯಲ್ಲಿ ಯಾರೂ ಸರಿಯಾಗಿ ವಿಮರ್ಶೆಗೆ ಗುರಿಪಡಿಸಿದಂತೆ ತೋರುವುದಿಲ್ಲ. ಇನ್ನಾದರೂ ಯಕ್ಷಗಾನದಲ್ಲಿ ಕಂಡುಬರುವ ಗಂಭೀರ ಸಂದರ್ಭಗಳಿಗೂ ಹಾಸ್ಯದ ಭಾಗ(ಇಂಟರ್‌ಲೂಡ್)ಗಳಿಗೂ ಸಾವಯುವ ಸಂಬಂಧವಿರಬೇಕು. ಪ್ರೇಕ್ಷಕರನ್ನು ನಗಿಸುವುದು ಇದರ ಒಂದು ಮುಖ್ಯ ಅಂಶವಾಗಿರುವುದನ್ನು ಮರೆಯದೆ 'ಸಾವಯುವತೆ' (arganic relationship)ಯನ್ನು ಗುರುತಿಸಿ ಉಳಿಸಿಕೊಳ್ಳುವುದು ಒಳ್ಳೆಯದು. ಗಂಭೀರ ನಾಟಕವಾಗಲಿ, ಬಯಲಾಟವಾಗಲಿ ಇಂತಹ ಅವಿಭಾಜ್ಯವಾದಷ್ಟು ಹಾಸ್ಯವನ್ನು ಉಳಿಸಿಕೊಳ್ಳುವುದರಿಂದ 'ಯಕ್ಷಗಾನ-ಬಯಲಾಟ'ವನ್ನು ನ್ಯಾಯವಾಗಿ ಉಳಿಸಿಕೊಂಡಂತಾಗುತ್ತದೆ. ಇಲ್ಲದಿದ್ದರೆ ನೇರವಾಗಿ ಸಮಕಾಲಿನವಾದ, ಜಾನಪದ ಸತ್ವವಾದ ಹಾಸ್ಯವನ್ನು (ಇದು ಪುರಾಣವನ್ನೂ ಸಮಕಾಲೀಕ ಜೀವನವನ್ನೂ ಬೆಸೆಯುವ ಸತ್ವವೂ ಆಗುತ್ತದೆ.) ತಳ್ಳಿಹಾಕಿದಂತಾಗುತ್ತದೆ. ಯಾವುದೇ ಜಾನಪದ ಕಲೆಯಲ್ಲಿ ಹಾಸ್ಯವು ಅನಿವಾರ್ಯವಾದುದು. ಗಂಭೀರತೆಯನ್ನು ರಕ್ಷಿಸುವುದಕ್ಕಾಗಿಯೇ ಹಾಸ್ಯವನ್ನು 'ಕೈಬಿಡು'ವುದು ಸರಿಯಾಗುವುದಿಲ್ಲ. ಕೆಲವು ಉತ್ತಮ ಗುಣಗಳಿದ್ದರೂ ಇಡಗುಂಜಿಯ ಮೇಳವು ಅನೇಕ ವೇಳೆ ಹಗುರವಾಗಿ ಬೇಸರವನ್ನುಂಟು ಮಾಡುತ್ತದೆ.

ಮೇಲಿನ ವಿಚಾರಕ್ಕೆ ಕಾರಂತರು ಕಾರಣವೆಂದರೂ ಸರಿಯಾದೀತು. ಅವರು ಗಂಭೀರತೆಯನ್ನೂ ಹಾಸ್ಯದ ದೃಶ್ಯಗಳನ್ನೂ ಬೆರಸಕೂಡದೆಂದೂ ಅವೆರಡನ್ನೂ ಬೇರೆ ಬೇರೆ ಮಾಡಬೇಕಾದೀತೆಂದೂ ನಿಶ್ಚಯಿಸಿದಂತಿದೆ. (ನನ್ನೊಡನೆ ಮತ್ತು ಕೆಲವರೊಡನೆ ಲೋಕಾಭಿರಾಮ ಮಾತನಾಡುತ್ತಾ ಹೀಗೆ ಅಭಿಪ್ರಾಯ ಪಟ್ಟುದುಂಟು) ಆದುದರಿಂದ ಯಾವುದೇ ಯಕ್ಷಗಾನ ಬಯಲಾಟದಲ್ಲಿ (ತೆಂಕುತಿಟ್ಟು ಅಥವಾ ಬಡಗುತಿಟ್ಟು) 'ಸಾವಯುವತೆ'ಯನ್ನು ಕಾಪಾಡುವ ಪ್ರಯತ್ನ ಮಾಡಲೇ ಬೇಕಾದೀತು. ಇದು ಆಗ ಭಾಗವತರ ಅಥವಾ ಕಾರಂತರ ನಿರ್ದೇಶನದ ಒಂದು ಮುಖ್ಯ ಹೊಣೆಗಾರಿಕೆಯಾದೀತು.

ಕಾರಂತರು ಯಕ್ಷಗಾನವನ್ನು ಸಂಸ್ಕರಿಸ ತೊಡಗಿದ ಮೇಲೆ ಬೇರೆಯ ಮೇಳಗಳ ಒಡೆಯರೂ ಕಲಾವಿದರೂ ವಿಚಾರ ಮಾಡಿದ್ದಾರೆನ್ನುವುದಕ್ಕೂ ಸುಧಾರಣೆಯಲ್ಲಿ ಎಚ್ಚರವಹಿಸುತ್ತಿದ್ದಾರೆಂಬುದಕ್ಕೂ ಆಧಾರಗಳನ್ನು ಪ್ರದರ್ಶನಗಳಲ್ಲಿಯೇ ಕಾಣುತ್ತೇವೆ. ಆದರೆ ಉಳಿದವರ ಸುಧಾರಣೆಯು ಸದ್ಯಕ್ಕೆ ಅನುಕರಣೆಯ ರೂಪದಲ್ಲಿಯೂ ಕಂಡುಬರುತ್ತದೆ. ಶಂಭು ಹೆಗ್ಗಡೆಯಂಥವರು ಕೋರಿಯೋಗ್ರಫಿಯನ್ನು ಅಭಿನಯವನ್ನೂ ಬಳಸುವುದರಲ್ಲಿಯೂ ಕಾಣುತ್ತೇವೆ. ಯಕ್ಷಗಾನದಲ್ಲಿ ಮುಖಾಭಿನಯವನ್ನು ತುಂಬ ಎಚ್ಚರಿಕೆಯಿಂದ ಬಳಸಲು ಕಾರಂತರೇ ಪ್ರಯತ್ನಿಸಿದರೆಂಬುದನ್ನೂ ಗೀತ ಮತ್ತು ನೃತ್ಯಗಳ ಸಂಬಂಧವನ್ನು ವಾದ್ಯಮೇಳದ ಹೊಂದಿಕೆಗೆ ತಂದವರೆಂಬುದನ್ನೂ ಮರೆಯುವಂತಿಲ್ಲ. ಯಕ್ಷಗಾನ ಕೃತಿಗಳು ಸುಮಾರು 300ರಷ್ಟಿರುವುದರಿಂದ ಸುಧಾ

ರಣೆಯಲ್ಲಿ ನಿಜವಾಗಿ ಮಾಡಬೇಕಾದ ಕೆಲಸ ಇನ್ನೂ ರಾಶಿಯಾಗಿಬಿದ್ದಿದೆ ಎನ್ನಬೇಕಾಗುತ್ತದೆ. ಕಾರಂತರ ಮಾರ್ಗದರ್ಶನವನ್ನು ಸದ್ಯಕ್ಕೆ ನಾಲ್ಕು ಬಯಲಾಟಗಳಲ್ಲಿ (ನಳದಮಯಂತಿ, ಭೀಷ್ಮ ಪ್ರತಿಜ್ಞೆ, ವೀರ ಅಭಿಮನ್ಯು ಮತ್ತು ಪಂಚವಟಿ) ಕಾಣುತ್ತಿದ್ದೇವೆ. ಉಳಿದಿರುವ ಹೊಣೆಗಾರಿಕೆಯ ಕೆಲಸವನ್ನು ಇದರಿಂದ ಊಹಿಸಿಕೊಳ್ಳಲು ಮತ್ತು ಪ್ರಯತ್ನಶೀಲರಾಗಲು ಅನುಕೂಲವಾಗಿರುತ್ತದೆ. ಪೌರಾಣಿಕ ಕಥಾವಸ್ತುವನ್ನು ಆದರ ವೈವಿಧ್ಯ ಪೂರ್ಣ ಪಾತ್ರಗಳನ್ನು ಖಚಿತವಾಗಿ ರೂಪಿಸಲು ಯಕ್ಷಗಾನ ಪ್ರಕಾರವು ತುಂಬ ಸುಂದರವೂ ಐಸಿರಿಯ ಮೊತ್ತವೂ ಅನುಕೂಲಕರವೂ ಆದುದಾಗಿದೆ. ಈ ಬಗೆಯ ಅನುಕೂಲವೂ ಸ್ಪಷ್ಟ ಪಾತ್ರ ಚಿತ್ರಣವೂ ಯಕ್ಷಗಾನದ ಹಿರಿಮೆಯೆಂದು ಹೇಳುವಾಗ ಉಳಿದ ಅಂದರೆ ನಮ್ಮ ಸಂಗೀತ ನಾಟಕವಾಗಲಿ ಆಧುನಿಕ ನಾಟಕಗಳಾಗಲಿ ಈ ಅನುಕೂಲಗಳನ್ನು ಪಡೆಯಲಾರವು ಎಂಬುದನ್ನು ಯಾರೂ ಬೇಕಾದರೂ ಪರಿಶೀಲಿಸಿ ಅರಿಯಕೊಳ್ಳಬಹುದು. ಹೀಗೆ ಯಕ್ಷಗಾನ ಬಯಲಾಟವು ಕನ್ನಡ ಜನಜೀವನದ ಒಂದು ಹೆಮ್ಮೆಯಾಗಿದೆ.

(ತಾ॥ 8-1-82 ರಿಂದ 18-1-82 ರವರೆಗೆ ಉಡುಪಿಯಲ್ಲಿ ಜರುಗಿದ ಯಕ್ಷಗಾನ ರಾಷ್ಟ್ರೀಯ ಸಮ್ಮೇಲನದಲ್ಲಿ observer ಆಗಿದ್ದುದರ ಫಲವಾಗಿ ಈ ಲೇಖನ ಮೂಡಿದೆ)

---

ನಮ್ಮ ನಾಡಿನ ಅರ್ಥಶಾಸ್ತ್ರಜ್ಞರು, ರಾಜಕೀಯ ಪುಡಾರಿಗಳು ಈ ವಿದೇಶೀವಿನಿಮಯದ ಹಾಡನ್ನೇ ಹಾಡುತ್ತಿದ್ದಾರೆ. ನಮ್ಮ ಭೂಮಿಯ ಖನಿಜಗಳು ಮರಿ ಹಾಕುವ ವಸ್ತುಗಳಲ್ಲ; ಅದು ಚಿನ್ನವಿರಲಿ, ಬೆಳ್ಳಿಯಿರಲಿ, ಕಲ್ಲಿದ್ದಲಿರಲಿ, ಕಬ್ಬಿಣವಿರಲಿ, ತೈಲವಿರಲಿ–ಅವುಗಳ ಒಟ್ಟು ಮೊತ್ತಕ್ಕೆ ಒಂದು ಮಿತಿ ಇದೆ. ಇನ್ನೊಂದು ಇಪ್ಪತ್ತು ವರ್ಷಗಳ ಅವಧಿಯಲ್ಲಿ ಭೂಗರ್ಭದ ತೈಲ ನಿಕ್ಷೇಪ ಮುಗಿದೀತು–ಎಂದು ಬಲ್ಲವರು ಹೇಳುತ್ತಿದ್ದಾರೆ. ಈಗಾಗಲೇ ತಾಮ್ರದ ಅಭಾವ ಕಾಣಿಸುತ್ತಿದೆ. ನಾಳೆ ದಿನ ಕಬ್ಬಿಣದ ಅದಿರಿನಂಥ ಸಾಮಾನ್ಯ ಖನಿಜ ಕೂಡ ಇಂದಿನ ಪ್ರಮಾಣದಲ್ಲಿ ಉಪಯೋಗಿಸಿದರೂ ಸರಿಯೇ ; ಪರರಿಗೆ ವಿಕ್ರಯಿಸಿ ಅದರಿಂದ ಹಣ ಸಂಪಾದಿಸಿದರೂ ಸರಿಯೆ. ಕೇವಲ ಈಚಿನ ಮೂರು ಶತಮಾನಗಳ ಅವಧಿಯಲ್ಲಿ ನಾವು ಜಗತ್ತಿನ ಜೈವಿಕ ಸಂಪತ್ತನ್ನೂ, ಖನಿಜ ಸಂಪತ್ತನ್ನೂ ಕೊಳ್ಳೆ ಹೊಡೆದು ಹುಗಿಸುತ್ತಿರುವ ಪ್ರಮಾಣವನ್ನೂ ಕಾಣುವಾಗ, ನಾವು ಅವಿವೇಕಿಗಳು ಮಾತ್ರವಲ್ಲ, ನಾಳಿನ ಬದುಕಿಗೆ ಮೃತ್ಯುಗಳು ಎಂದು ಹೇಳಿದರೆ ಆ ಮಾತು ಕಡಿಮೆಯೇ ಆದೀತು.

**–ಶಿವರಾಮ ಕಾರಂತ**
ಸ್ವಾರ್ಥಿಮಾನವ

# ಟಿಪ್ಪಣಿಗಳು

## ಆದೇಶ ಸಂಧಿ / ವ್ಯಂಜನ ಸಂಧಿಯನ್ನು ಕುರಿತು / –ಕ. ನಂ. ನಾಗರಾಜು

ಕನ್ನಡ ವ್ಯಾಕರಣಗಳಲ್ಲಿ ಸ್ವರದ ಮುಂದೆ ವ್ಯಂಜನ ಬಂದು ಅಥವಾ ವ್ಯಂಜನದ ಮುಂದೆ ವ್ಯಂಜನವು ಬಂದು ನಡೆಯುವ ಸಂಧಿಕಾರ್ಯವನ್ನು ಆದೇಶಸಂಧಿಯೆಂದು ವಿವರಿಸಲಾಗಿದೆ.

ಕೇಶಿರಾಜನು ಆದೇಶಸಂಧಿಯ ಬಗ್ಗೆ ವಿವರಣೆ ಕೊಡುವ ಸೂತ್ರದಲ್ಲಿ 'ಪದವಿಧಿಯೊಳ್' ಎಂದು ಹೇಳಿದ್ದಾನೆ. ಅಂದರೆ ಆದೇಶಸಂಧಿಯು ಸಮಾಸ ಪದಗಳಲ್ಲಿ ಕಂಡುಬರುತ್ತದೆ ಎಂದು ಹೇಳಿದಂತಾಯಿತು. ಅದನ್ನು ಸಾದರಪಡಿಸಲು ಕೊಡುವ ಉದಾಹರಣೆಗಳನ್ನು ಬಿಡಿಸಿ ತೋರುವ ವಿಧಾನ ಹೀಗಿದೆ:

ಪೞ + ಕನ್ನಡ = ಪೞಗನ್ನಡ ; ಉಡೆ + ತೊವಲ್ = ಉಡೆದೊವಲ್

ಕಣ್ + ಪೊರೆ = ಕಣ್ಬರಿ

ಸ್ವರ ಮತ್ತು ವ್ಯಂಜನಗಳ ಮುಂದೆ ವ್ಯಂಜನಗಳು ಬಂದಿವೆಯೆಂಬುದನ್ನು ತೋರಿಸಲು ಹೀಗೆ ಬಿಡಿಸಲಾಗುತ್ತದೆ.

ಸಮಾಸ ಪ್ರಕರಣದಲ್ಲಿ ಸಮಾಸಗಳನ್ನು ಬಿಡಿಸುವಾಗ ವಿಗ್ರಹ ವಾಕ್ಯಗಳನ್ನು ರಚಿಸಲಾಗುತ್ತದೆ. ಅದು ಸರಿಯಾದ ವಿಧಾನವೂ ಆಗಿದೆ.

ಉದಾ : ಕಣ್ಬರಿ—ಕಣ್ಣಪರಿ (ವಿಗ್ರಹವಾಕ್ಯ)

ಇಲ್ಲಿ ಪೂರ್ವ ಪದವು ಷಷ್ಠ್ಯಂತವಾಗಿದೆ. ಸಮಾಸ ನಡೆದಾಗ ಷಷ್ಠಿಯು ಲೋಪವಾಗಿದೆ. ಆದುದರಿಂದ ವ್ಯಂಜನದ ಮುಂದೆ ವ್ಯಂಜನವು ಬಂದು ಸಂಧಿಯಾಗಿದೆಯೆಂದು ಹೇಳುವುದು ಸರಿಯಲ್ಲ.

ಸಮಾಸ ಪದಗಳಲ್ಲಿ ಸಂಧಿಕಾರ್ಯ ನಡೆದಿದೆಯೆಂದು ಬಿಡಿಸಿ ತೋರುವಾಗ ಪೂರ್ವ ಪದದ ನಿಜ ಸ್ವರೂಪವನ್ನು ಕಡೆಗಣಿಸಲಾಗಿದೆ.

ಉದಾ : ಮಳೆ + ಕಾಲ = ಮಳೆಗಾಲ

ತಲೆ + ತೋರು = ತಲೆದೋರು

ಕಣ್ + ಪನಿ = ಕಂಬನಿ

ಹೀಗೆ ಬಿಡಿಸಿ, ಕ, ತ, ಪಗಳಿಗ ಗ, ದ, ಬಗಳು ಆದೇಶವಾಗಿ ಬಂದಿವೆ, ಇವುಗಳು ಆದೇಶ ಸಂಧಿಗಳಾಗಿವೆ ಎಂದು ಸಾಮಾನ್ಯವಾಗಿ ಹೇಳಲಾಗುವುದು.

ಮೇಲಿನ ಉದಾಹರಣೆಗಳಲ್ಲಿರುವ ಪೂರ್ವ ಪದಗಳು ಮಳೆಯ, ತಲೆಯನ್ನು, ಕಣ್ಣ ಎಂದಾಗುತ್ತವೆ. ಸಮಾಸ ನಡೆದುದರ ಫಲವಾಗಿ ಪೂರ್ವಪದಗಳ ವಿಭಕ್ತಿ ಪ್ರತ್ಯಯಗಳು ಲೋಪವಾಗಿವೆ. ಆದೇಶಸಂಧಿಯ ನಿಯಮಾವಳಿಯಲ್ಲಿ ಇವುಗಳಿಗೆ ವಿವರಣೆ ದೊರೆಯುವುದಿಲ್ಲ. ಕ, ತ,ಪಗಳು ಗ, ದ, ಬ ಗಳಾಗಿವೆ ಎಂದು ಹೇಳಲು ಎಷ್ಟು ಬೇಕೊ ಅಷ್ಟು ವಿವರಣೆಗಳನ್ನು ಮಾತ್ರ ಅದು ನೀಡುತ್ತದೆ. ಸಮಾಸ ಪದವೊಂದು ಸಿದ್ಧಿಸುವಾಗ ನಡೆಯುವ ಬದ

ಲಾವಣೆಗಳೆಲ್ಲವನ್ನೂ ಅಲ್ಲಿ ವಿವರಿಸಿಲ್ಲ. ಪೂರ್ವ ಪದವು ತನ್ನ ಪ್ರತ್ಯಯಗಳನ್ನು ಕಳೆದು ಕೊಂಡು ಉತ್ತರಪದದೊಂದಿಗೆ ಹೊಂದಿಕೊಳ್ಳುವ ರೀತಿ ಅರ್ಥದ ದೃಷ್ಟಿಯಿಂದ ಮುಖ್ಯ ವಾದದ್ದು. ಹಾಗೆಯೇ ಉತ್ತರ ಪದಗಳು ಪೂರ್ವಪದಗಳನ್ನು ಹೊಂದಿಸಿಕೊಳ್ಳುವುದೂ ಮುಖ್ಯವಾದದ್ದು. ಅದರ ಪರಿಣಾಮವಾಗಿಯೇ ಕ, ತ, ಪ ಗಳು ಗ, ದ, ಬ ಗಳಾಗಿವೆ. ಉಚ್ಚಾರಣೆಯ ಸೌಲಭ್ಯಕ್ಕಾಗಿ ಈ ಬದಲಾವಣೆ ನಡೆಯುತ್ತಿದೆ. ವರ್ಗ ಪ್ರಥಮಾಕ್ಷರವು ವರ್ಗತೃತೀಯವಾಗುತ್ತಿದೆಯೆಂದು ಕೇಶಿರಾಜನು ಹೇಳಿದ್ದಾನೆ. ಅಂದರೆ ಅಘೋಷಗಳು ಘೋಷಗಳಾಗಿವೆ ಎಂದು ಹೇಳಿದಂತಾಯಿತು. 'ಆದೇಶ' ಎಂದರೆ ಒಂದರ ಸ್ಥಾನದಲ್ಲಿ ಇನ್ನೊಂದು ಬರುವುದು ಎಂದರ್ಥ. ಆದೇಶಸಂಧಿಗೆ ಕೊಡುವ ಉದಾಹರಣೆಗಳಲ್ಲಿ ಅಘೋಷ ಗಳು ಘೋಷಗಳಾಗಿವೆಯೇ ಹೊರತು ಸ್ಥಾನಾಕ್ರಮಣವೇನೂ ಕಂಡುಬರುವುದಿಲ್ಲ. ಅಲ್ಲದೆ ಇದು ಸಂಧಿಗೆ ಸಂಬಂಧಿಸಿದ ಬದಲಾವಣೆಯೂ ಅನ್ನಿಸುವುದಿಲ್ಲ. ಸಮಾಸಕಾರ್ಯ ನಡೆಯು ವಾಗ ಪದಗಳಲ್ಲಿ ಏರ್ಪಡುವ ಆಂತರಿಕ ಹೊಂದಾಣಿಕೆಯೆಂದು ಇದನ್ನು ವಿವರಿಸಬಹುದು. ಆದುದರಿಂದ ಇದು ಸಮಾಸಕಾರ್ಯವೇ ಹೊರತು ಆದೇಶಸಂಧಿಯಲ್ಲ.

# ಪರಿಚಯ

**10 ಮಾರ್ಚ್ 1982 ?**

o

ಎಚ್. ಆರ್. ರಾಮಕೃಷ್ಣರಾವ್

ನಾವು ವಾಸಿಸುತ್ತಿರುವ ಭೂಮಿ ಸೌರಮಂಡಲದಲ್ಲಿ ಸುತ್ತುತ್ತಿರುವ ಒಂದು ವಿಶಿಷ್ಟ ಗ್ರಹ. ಇದರಂತೆಯೇ ಉಳಿದ ಎಂಟು ಗ್ರಹಗಳು ಸೂರ್ಯನ ಸುತ್ತಲೂ, ಚಂದ್ರ ಭೂಮಿಯ ಸುತ್ತಲೂ ಪರಿಭ್ರಮಿಸುತ್ತಿವೆ. ಹೀಗೆ ವಿವಿಧ ತ್ರಿಜ್ಯದ ವೃತ್ತಗಳಲ್ಲಿ (ವಾಸ್ತವವಾಗಿ ದೀರ್ಘವೃತ್ತಗಳಲ್ಲಿ) ಬೇರೆ ಬೇರೆ ವೇಗಗಳಲ್ಲಿ ಗ್ರಹಗಳು ಸುತ್ತುತ್ತಿರುವಾಗ ಒಮ್ಮೊಮ್ಮೆ ಎಲ್ಲ ಗ್ರಹಗಳೂ ಸೂರ್ಯನ ಒಂದು ಪಾರ್ಶ್ವದಲ್ಲಿ ಬರುವ ಸಾಧ್ಯತೆ ಇದೆ. ಇದು ಸೂರ್ಯಕೇಂದ್ರ ಸಮಾಗಮ (Heliocentric Conjunction) ಇದೇ ರೀತಿ, ಸೂರ್ಯನೂ ಸೇರಿದಂತೆ ಉಳಿದ ಗ್ರಹಗಳು ಭೂಮಿಯ ಒಂದು ಪಾರ್ಶ್ವದಲ್ಲಿ ಸಮಾಗಮವಾಗುವ ಸಾಧ್ಯತೆಯೂ ಇದೆ. ಇದು "ಭೂಕೇಂದ್ರ ಸಮಾಗಮ" (Geocentric Conjunction). ಈ ರೀತಿಯ ಆಕಾಶಕಾಯಗಳ ಸಮಾಗಮವಾದಾಗ ಅಷ್ಟಗ್ರಹ ಕೂಟವೆಂದೋ, ನವಗ್ರಹಕೂಟವೆಂದೋ ಕರೆದು, ಭೂಮಿಗೆ ಹಾಗೂ ಭೂವಾಸಿಗಳಿಗೆ ಏನಾದರೂ ಅನಿಷ್ಟ ಸಂಭವಿಸಬಹುದೆಂಬ ಊಹಾಪೋಹ ಸಹಜವೆ. ಹೀಗೆ ಭವಿಷ್ಯ ಹೇಳುವ ಗುಂಪು ಎರಡು ರೀತಿಯದ್ದಾಗಿರುತ್ತದೆ.

೧. ಜ್ಯೋತಿಷಿಗಳ ಗುಂಪು

೨. ವೈಜ್ಞಾನಿಕ ಹಿನ್ನೆಲೆಯಿದ್ದು, ವೈಜ್ಞಾನಿಕ ಲೇಖನಗಳನ್ನು, ಕಾಲ್ಪನಿಕ ಕಾದಂಬರಿಗಳನ್ನು ಬರೆಯುವವರು

ಮೊದಲನೆಯ ಗುಂಪಿನವರು 1962 ರಲ್ಲಿ ಸಂಭವಿಸಿದ ಅಷ್ಟಗ್ರಹಕೂಟದ ಸಮಯದಲ್ಲಿ ಅನಿಷ್ಟ ಸಂಭವದ ಒಂದು ದೊಡ್ಡ ಪಟ್ಟಿಯನ್ನೆ ಕೊಟ್ಟಿದ್ದರು. ಅಂತಹದೇನೂ ಸಂಭವಿಸಲಿಲ್ಲ ಎನ್ನುವುದು ಎಲ್ಲರಿಗೂ ತಿಳಿದಿದೆ. ಜ್ಯೋತಿಷಿಗಳ ನವಗ್ರಹಗಳಿಗೂ, (ಅವರ ಪ್ರಕಾರ ರವಿ ನಕ್ಷತ್ರವೂ ಒಂದು ಗ್ರಹ–ಗ್ರಹಾಧಿಪ) ಖಗೋಳ ವಿಜ್ಞಾನಿಗಳು ಹೆಸರಿಸುವ ನವಗ್ರಹಗಳಿಗೂ ಯಾವ ಸಂಬಂಧವೂ ಇಲ್ಲ. ನೀಲ್ ಆರ್ಮ್‌ಸ್ಟ್ರಾಂಗ್ ಓಡಾಡಿದ್ದು ಖಗೋಳಶಾಸ್ತ್ರದ ಚಂದ್ರನ ಮೇಲೆ; ಜ್ಯೋತಿಷಿಗಳ ಚಂದ್ರನ ಮೇಲಲ್ಲ. ಅವರು ಹೆಸರಿಸುವ ಯಾವ ಗ್ರಹಕ್ಕೂ (ಸೂರ್ಯನನ್ನುಳಿದು) ಸ್ವಯಂ ಜ್ಯೋತಿಯೇ ಇಲ್ಲ. ಇನ್ನು ದೃಷ್ಟಿ ಎಲ್ಲಿಂದ ಬರಬೇಕು !

ಎರಡನೆಯ ಗುಂಪಿನವರ 'ಭವಿಷ್ಯ' ಈಗ ಚಲಾವಣೆಯಲ್ಲಿರುವ ವೈಜ್ಞಾನಿಕ

ಶಬ್ದಗಳ ಮುಸುಕಿನಿಂದಾಗಿ ಜನಗಳಲ್ಲಿ ಕುತೂಹಲ, ಭಯ ಮತ್ತು ಒಂದು ರೀತಿಯ ನಂಬುಗೆಯನ್ನು ಮೂಡಿಸಿವೆ. ಗ್ರಿಬ್ಬನ್ ಮತ್ತು ಸ್ಟೀಪನ್ ಎಂಬುವವರು 1974ರಲ್ಲಿ "The Jupiter effect" ಎಂಬ ಶೀರ್ಷಿಕೆಯ ಪುಸ್ತಕ ಪ್ರಕಟಿಸಿದರು. ಆ ಪುಸ್ತಕದಲ್ಲಿ ಅವರು ಬರೆದ ಮುಖ್ಯ 'ಭವಿಷ್ಯ' ಕೆಳಗೆ ಕೊಟ್ಟಿದೆ.

"1977 ರಿಂದ 1982ರ ವರೆಗಿನ ಕಾಲದಲ್ಲಿ ಗ್ರಹಗಳ ಅಸಾಮಾನ್ಯ ಸಮಾಗಮ (ಕೂಟ) ವಾಗುವುದೇ ಅಲ್ಲದೆ 1982ರ ಫೆಬ್ರವರಿ ತಿಂಗಳಿನಲ್ಲಿ ಎಲ್ಲ ಗ್ರಹಗಳೂ ಸೂರ್ಯನ ಏಕಪಾರ್ಶ್ವದಲ್ಲಿ ಬಂದು, ಏಕ ಸರಳರೇಖೆಯ ಮೇಲೆ ಬರುತ್ತದೆ. ಈ ರೀತಿಯ ವಿಶೇಷ ಕೂಟ 179 ವರ್ಷಕ್ಕೊಮ್ಮೆ ಸಂಭವಿಸುತ್ತದೆ. ಸಕಲ ಗ್ರಹಗಳ ಒಟ್ಟು ಗುರುತ್ವಬಲದಿಂದಾಗಿ, ಅನಿಲರೂಪದಲ್ಲಿರುವ ಸೂರ್ಯನ ಹೊರವೈ ಉಬ್ಬಿ, ಹೆಚ್ಚು ಪ್ರಮಾಣದಲ್ಲಿ ಸೂರ್ಯಕಲೆಗಳು (Sunspots) ಕಾಣಿಸಿಕೊಂಡು, ಉದ್ರಿಕ್ತಗೊಂಡ ಸೂರ್ಯನಿಂದ ಚಿಮ್ಮಲ್ಪಡುವ ಪ್ರೋಟಾನ್ ಮತ್ತು ಇಲೆಕ್ಟ್ರಾನ್‌ಗಳ ವಿಸರಣ ಪ್ರವಾಹವು ಭೂಮಿಯ ವಾತಾವರಣದ ಅನಿಲಗಳ ಚಲನೆಯ ವೇಗವನ್ನು ಹೆಚ್ಚಿಸುವುದರಿಂದ, ಭೂಮಿ ತನ್ನ ಅಕ್ಷದ ಮೇಲೆ ಬುಗುರಿಯಂತೆ ಸುತ್ತುತ್ತಿರುವ ಆವರ್ತಕಾಲದಲ್ಲಿ ಬದಲಾವಣೆಯುಂಟಾಗುವುದು. ಇದರಿಂದಾಗಿ ಭೂಕಂಪಗಳಾಗುತ್ತವೆ. ಅದರಲ್ಲೂ ಅಮೆರಿಕೆಯ ಕ್ಯಾಲಿಫೋರ್ನಿಯಾದಲ್ಲಿ ಭಾರಿ ಪ್ರಮಾಣದ ಭೂಕಂಪವಾಗಲಿದೆ. ಕ್ಯಾಲಿಫೋರ್ನಿಯಾದ ಭೂಗರ್ಭದಲ್ಲಿರುವ 'San Andreas fault' ಎಂದು ಕರೆಯುವ ಭೂಪದರ ರಚನೆಯಲ್ಲಿನ ದೋಷವೆ ಇದಕ್ಕೆ ಕಾರಣ. ಗ್ರಹಗಳಲ್ಲೆಲ್ಲ ಭಾರಿ ತೂಕದ ಗುರು ಗ್ರಹವು, ಸೂರ್ಯ ಮತ್ತು ಭೂಮಿಯ ಮೇಲೆ ಹೆಚ್ಚಿನ ಪರಿಣಾಮ ಬೀರುವುದರಿಂದ ಇದನ್ನು 'ಗುರು ಪರಿಣಾಮ' (Jupiter effect) ಎಂದು ಕರೆಯಲಾಗಿದೆ." ಸ್ವಲ್ಪ ಹೆಚ್ಚು ಕಡಿಮೆ ಇದೇ ಅರ್ಥ ಬರುವ ಹೇಳಿಕೆಗಳನ್ನು ಬೇರೆ ಬೇರೆ ವಿಜ್ಞಾನ ಬರಹಗಾರರೂ ಬರೆದಿದ್ದಾರೆ. ಇವುಗಳು ಎಷ್ಟರಮಟ್ಟಿಗೆ ನಿಜ ಎನ್ನುವುದನ್ನು ಭೌತ-ಖಗೋಳ ವಿಜ್ಞಾನದ ಸೂತ್ರಗಳ ಚೌಕಟ್ಟಿನಲ್ಲಿ ವಿಶ್ಲೇಷಿಸಲಾಗಿದೆ.

೧. ಮೇಲೆ ಹೇಳಿದ ಸೂರ್ಯಕೇಂದ್ರ ಮಹಾ ಸಮಾಗಮವಾಗುವುದು ಮಾರ್ಚ್ 10, 1982 ರಂದು; ಫೆಬ್ರವರಿಯಲ್ಲಲ್ಲ.

೨. ಇದೇ ರೀತಿಯ ಭೂಕೇಂದ್ರ ಮಹಾ ಸಮಾಗಮವು ನವಂಬರ್ 15, 1982 ರಂದು ಸಂಭವಿಸಲಿದೆ.

೩. ಎಲ್ಲ ಗ್ರಹಗಳೂ ಸೂರ್ಯನ ಏಕಪಾರ್ಶ್ವದಲ್ಲಿ, ಏಕಸರಳರೇಖೆಯಲ್ಲಿ ಬರುವುದಿಲ್ಲ. ಕನ್ಯ, ತುಲಾ ಮತ್ತು ವೃಶ್ಚಿಕ ರಾಶಿಗಳಲ್ಲಿ ನವಗ್ರಹಗಳು (ಇದರಲ್ಲಿ ಭೂಮಿಯೂ ಸೇರಿದೆ) ಚಲಿಸುವುದರಿಂದ ಎಲ್ಲ ಗ್ರಹಗಳೂ 95 ಡಿಗ್ರಿ ಕೋನಾಂತರದಲ್ಲಿ ಸಮಾಗಮಗೊಳ್ಳುತ್ತವೆ.

ಸೂರ್ಯ ಮತ್ತು ಗ್ರಹಗಳ ಮಧ್ಯೆ, ಒಂದು ಗ್ರಹಕ್ಕೂ ಮತ್ತೊಂದು

ಗ್ರಹಕ್ಕೂ ಮಧ್ಯೆ ಇರುವ ಪರಸ್ಪರ ಪ್ರಭಾವ ಸಂಬಂಧಗಳು ಅನುಕ್ರಮವಾಗಿ ಈ ಕೆಳಗೆ ಸೂಚಿಸಿರುವ ಭೌತ ಬಲಗಳನ್ನವಲಂಬಿಸಿವೆ.

೧. ಗುರುತ್ವಾಕರ್ಷಣೆ

೨. ಕಾಂತಕ್ಷೇತ್ರಗಳ ಪರಸ್ಪರ ಪ್ರಭಾವ

೩. ಹೊರಸೂಸುವ ವಿಕಿರಣಗಳು

ಸೂರ್ಯ ನಕ್ಷತ್ರ ಒಂದಕ್ಕೆ ಮಾತ್ರ ಈ ಮೂರೂ ಬಗೆಯಲ್ಲಿ ಸೌರಮಂಡಲದ ಉಳಿದ ಆಕಾಶಕಾಯಗಳಾದ ಗ್ರಹಗಳು, ಧೂಮಕೇತುಗಳು ಮತ್ತು ಉಳಿದ ಸಣ್ಣ ಪ್ರಮಾಣದ ಕ್ಷುದ್ರಗ್ರಹಗಳ ಮೇಲೆ ಪ್ರಭಾವ ಬೀರಬಲ್ಲ ಸಾಮರ್ಥ್ಯವಿದೆ. ಸೂರ್ಯ ಮತ್ತು ಭೂಮಿಗಿರುವ ಸಂಬಂಧ ಈ ಮೂರು ಬಗೆಯ ಪ್ರಭಾವದಿಂದಾದದ್ದು. ಗ್ರಹಗಳಲ್ಲಿ ಗುರು ಗ್ರಹಕ್ಕೆ ಮಾತ್ರ ಸ್ವಲ್ಪಮಟ್ಟಿಗೆ ಪ್ರಭಾವಬೀರಬಲ್ಲ ಕಾಂತಕ್ಷೇತ್ರವಿದೆ (Magnetic field). ಉಳಿದ ಗ್ರಹಗಳಿಗೆ ಗುರುತ್ವಾಕರ್ಷಣೆಯ ಪ್ರಭಾವವೇ ಮುಖ್ಯವಾದದ್ದು.

ಯಾವುದಾದರೂ ಎರಡು ವಸ್ತುಗಳನ್ನು ಬಂಧಿಸುವ ಗುರುತ್ವಾಕರ್ಷಣ (F) ಬಲವನ್ನು

$$F = \frac{G\,Mm}{R^2}$$ ಎನ್ನುವ ಸೂತ್ರದಿಂದ ಅಳೆಯಬಹುದು. ಸೂರ್ಯ ಅಥವಾ ಭೂಮಿಯ ವ್ಯಾಸವನ್ನು d ಎಂದು ಕರೆಯೋಣ. ಯಾವುದಾದರೂ ಗ್ರಹಕ್ಕೂ ಮತ್ತು ಸೂರ್ಯನ (ಅಥವಾ ಭೂಮಿಯ) ಸಮೀಪ ಭಾಗಕ್ಕೂ ಇರುವ ದೂರ R ಆಗಿರಲಿ. ಗ್ರಹಕ್ಕೂ ಮತ್ತು ಸೂರ್ಯನ ಮತ್ತೊಂದು ಪಾರ್ಶ್ವಕ್ಕೂ ಇರುವ ದೂರ (R + d) ಆಗಿರುತ್ತದೆ. ಗುರುತ್ವಾಕರ್ಷಣೆಯಿಂದಾಗಿ ಎರಡೂ ಪಾರ್ಶ್ವಗಳಲ್ಲಿನ ಒಂದು ಕಿಲೋಗ್ರಾಂ ಭಾರದ ಮೇಲೆ ಪರಿಣಾಮ ಬೀರುವ ಭೇದಾತ್ಮಕ ಗುರುತ್ವಬಲವು (Differential Gravitation)

$$F_1 - F_2 = \frac{GM}{R^2} - \frac{GM}{(R+d)^2}$$ ಆಗಿರುತ್ತದೆ.

Rಗೆ ಹೋಲಿಸಿದಾಗ d ತುಂಬಾ ಚಿಕ್ಕದಾಗಿದ್ದು ನಾವು ಅದನ್ನು ಗಣನೆಗೆ ತೆಗೆದುಕೊಳ್ಳದೇ ಹೋದಲ್ಲಿ $F = \frac{2G\,Md}{R^3}$ ಎಂದು ಬರೆಯಬಹುದು. ಇದರಿಂದ ಮುಖ್ಯವಾಗಿ ತಿಳಿಯುವ ಅಂಶವೇನೆಂದರೆ ಆಕಾಶಕಾಯಗಳ ಮಧ್ಯೆ ಇರುವ ಗುರುತ್ವ ಬಲವು ಅವುಗಳ ಗಾತ್ರಕ್ಕಿಂತ, ಮಧ್ಯಂತರ ದೂರದ ಮೇಲೆ ಹೆಚ್ಚು ಅವಲಂಬಿಸಿದೆ.

ಉದಾಹರಣೆಗೆ ಭೂಮಿಯಲ್ಲಿ ಸಾಗರಗಳಲ್ಲಿನ ಉಬ್ಬರವಿಳಿತಗಳಿಗೆ ಚಂದ್ರ ಮತ್ತು ಸೂರ್ಯರ ಭೇದಾತ್ಮಕ ಗುರುತ್ವಬಲವೇ ಕಾರಣ.

| ಆಕಾಶಕಾಯ | ದ್ರವ್ಯರಾಶಿಯ ಪ್ರಮಾಣ ಕಿ. ಗ್ರಾಂ. ಗಳಲ್ಲಿ | ದೂರ (R) ಮೀಟರುಗಳಲ್ಲಿ | ಬಲ (ನ್ಯೂಟ್ರನ್) |
|---|---|---|---|
| ಚಂದ್ರ | $7.35 \times 10^{22}$ | $3.84 \times 10^{8}$ | $2.21 \times 10^{-9}$ |
| ಸೂರ್ಯ | $1.99 \times 10^{30}$ | $1.50 \times 10^{11}$ | $1.10 \times 10^{-9}$ |
| | | ಒಟ್ಟು | $3.21 \times 10^{-9}$ |

$G = 6.673 \times 10^{-11} N - M^2/kg^2$

ಭೂಮಿಯ ವ್ಯಾಸ $(d) = 1.2756 \times 10^7 M$ ಸೂರ್ಯನಿಗಿಂತ ಕೋಟಿ ಪಾಲು ಕಿರಿದಾದ ಚಂದ್ರ, ಸಾಗರಗಳಲ್ಲುಂಟಾಗುವ ಉಬ್ಬರ ವಿಳಿತಗಳಿಗೆ, ಸೂರ್ಯನಿಗಿಂತ 2.2 ಪಟ್ಟು ಹೆಚ್ಚು ಗುರುತ್ವ ಬಲವನ್ನು ಭೂಮಿಯ ಮೇಲೆ ಬೀರುತ್ತಾನೆ

ಇದೇ ಕೋಷ್ಟಕದ ಆಧಾರದ ಮೇಲೆ ಬುಧನಿಂದ ಪ್ಲೂಟೋವರೆಗಿನ ಎಲ್ಲ ಗ್ರಹಗಳ ಒಟ್ಟು ಪರಿಣಾಮ ಬಲ $1.30 \times 10^{-13}N$ ಎಂದು ಲೆಕ್ಕಮಾಡಿ ತೋರಿಸ ಬಹುದು. ಈ ಎಲ್ಲ ಲೆಕ್ಕಾಚಾರವೂ ಗ್ರಹಗಳು ಒಂದೇ ಸರಳರೇಖೆಯ ಮೇಲೆ ಬಂದಿವೆ ಎಂಬ ಕಲ್ಪನೆಯ ಮೇಲೆ ಮಾಡಿದ್ದುದಾಗಿದೆ. ಮೇಲಿನ ಸಂಖ್ಯೆಗಳಿಂದ ತಿಳಿದು ಬರುವ ಅಂಶವೆಂದರೆ ಚಂದ್ರ ಮತ್ತು ಸೂರ್ಯರಿಂದ ಸಾಗರಗಳ ಉಬ್ಬರವಿಳಿತ ಗಳಿಗಾಗುವ ಪರಿಣಾಮಕ್ಕೆ, ಉಳಿದೆಲ್ಲ ಗ್ರಹಗಳ ಒಟ್ಟು ಪರಿಣಾಮದಿಂದ, ಶೇಕಡ 0.004 ರಷ್ಟು ಹೆಚ್ಚುವರಿ ಮಾತ್ರ ಆಗಲಿದೆ.

ಎಲ್ಲಾ ಗ್ರಹಗಳೂ ಏಕ ಸರಳರೇಖೆಯ ಮೇಲೆ ಬಂದರೂ ಕೂಡ ಭೂಮಿಯ ಹೊರಮೈ ಮತ್ತು ಸಾಗರಗಳಲ್ಲಿನ ನೀರು ಅನುಕ್ರಮವಾಗಿ 0.008 ಮತ್ತು 0.04 ಮಿಲ್ಲಿಮೀಟರಿನಷ್ಟು ಹೆಚ್ಚು ಉಬ್ಬಬಹುದು. ವಾಸ್ತವವಾಗಿ ಮಾರ್ಚ್ 10ರ ದಿನ ಗ್ರಹಸಂಪದ (ಚಿತ್ರ ೧) ಏಕ ಸರಳರೇಖೆಯಲ್ಲಿ ಬರುವುದಿಲ್ಲವಾಗಿ, ಚಂದ್ರ ಸೂರ್ಯ ರಿಂದ ಸಾಮಾನ್ಯವಾಗಿ ಯಾವಾಗಲೂ ಆಗುವ ಪರಿಣಾಮಕ್ಕೆ ಉಳಿದ ಗ್ರಹಗಳ ಕೊಡುಗೆ ಏನೂ ಇಲ್ಲವೆಂದೇ ಹೇಳಬಹುದು ಮಾರ್ಚ್ 9ರಂದು ಹುಣ್ಣಿಮೆ. ಮಾರ್ಚ್ 10ರಂದು ಚಂದ್ರ ಭೂಮಿಯ ಒಂದು ಪಾರ್ಶ್ವದಲ್ಲಿ ಸುಮಾರು 12 ಡಿಗಿ ಗಳಷ್ಟು ಮುಂದಿರುತ್ತಾನೆ. ಹುಣ್ಣಿಮೆಯಂದು ಸಂಭವಿಸುವ ಉಬ್ಬರವಿಳಿತಗಳಿಗಿಂತ 'ನವಗ್ರಹ ಕೂಟ'ದ ದಿನ ಯಾವ ಹೆಚ್ಚುವರಿಯೂ ಆಗುವುದಿಲ್ಲ.

ಇನ್ನು ಸೂರ್ಯನತ್ತ ಗಮನ ಹರಿಸೋಣ. ಸೌರಮಂಡಲದ ದ್ರವ್ಯರಾಶಿಯ



10 ಮಾರ್ಚ್, 1982
ಗ್ರಹಕೂಟ
ನೆಪ್ಟ್ಯೂನ್
ಯುರೇನಸ್
ಪ್ಲೂಟೊ
ಗುರು
ಶನಿ
ಶನಿ
ಗುರು
ಬುಧ
ಶುಕ್ರ
ಮಂಗಳ
ಭೂಮಿ

ಶೇಕಡ 99.85ರಷ್ಟು ದ್ರವ್ಯರಾಶಿ ಸೂರ್ಯನಲ್ಲಿಯೇ ಇದೆ. ಈ ದ್ರವ್ಯರಾಶಿ ಪ್ಲಾಸ್ಮ ರೂಪದಲ್ಲಿದೆ. ಈ ಅನಿಲಗಳು ಭೂಮಿಯ ಗುರುತ್ವಾಕರ್ಷಣೆಇಂದಾಗಿ ಉಬ್ಬುತ್ತವೆ. ಉಳಿದೆಲ್ಲ ಗ್ರಹಗಳೂ ಸೂರ್ಯನ ಮೇಲೆ ಭೂಮಿಯ ಪರಿಣಾಮದ ಶೇಕಡ 20 ರಷ್ಟು ಮಾತ್ರ ಪ್ರಭಾವ ಬೀರುತ್ತವೆ. ಆದ್ದರಿಂದ ಸೂರ್ಯನ ಹೊರಮೈಯಲ್ಲಿ ಗಣನೀಯ ವಾದ ಯಾವ ಪರಿಣಾಮವೂ ಆಗುವುದಿಲ್ಲ. 1960 ರಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಸೂರ್ಯನಿಂದ ವಿಕಿರಣಗಳು ಹೊರಸೂಸಿದ್ದರೂ ಭೂಮಿಯ ಆವರ್ತಕಾಲದಲ್ಲಿ ಯಾವ ಬದಲಾವಣೆಯೂ ಆಗಿರಲಿಲ್ಲ. ಕ್ಯಾಲಿಫೋರ್ನಿಯಾದಲ್ಲಾಗಬಹುದಾದ ಭೂ ಕಂಪಕ್ಕೂ ಗ್ರಹಗಳ ಕೂಟಕ್ಕೂ ಯಾವ ಸಂಬಂಧವೂ ಇಲ್ಲ. ಭೂಮಿಯ ಒಳಪದರ ಗಳ ರಚನೆಯ ದೋಷದಿಂದಾಗಿ ಕ್ಯಾಲಿಫೋರ್ನಿಯಾದಲ್ಲಿ ಭೂಕಂಪ ಯಾವಾಗಬೇಕಾ ದರೂ ಸಂಭವಿಸಬಹುದು. ಹಾಗೆ ನೋಡಿದರೆ ಸೆಪ್ಟೆಂಬರ್ 24, 1980 ರಂದು ಚಂದ್ರ ಭೂಮಿಗೆ ಅತಿ ಸಮೀಪದಲ್ಲಿದ್ದ(356,800 ಕಿ.ಮಿ.) ಮಾರ್ಚ್ 10, 1922 ರಂದು ಚಂದ್ರನ ದೂರ 3,77,600 ಕಿ.ಮಿ. ಆದಿನ (24-9-80) ಚಂದ್ರನೊ ಬ್ಬನೇ ಮುಂದಿನ ನವಗ್ರಹ ಕೂಟದಂದು (ಚಂದ್ರನೂ ಸೇರಿ) ಭೂಮಿಯ ಮೇಲಾ ಗುವ ಒಟ್ಟು ಭೇದಾತ್ಮಕ ಗುರುತ್ವ ಬಲಕ್ಕಿಂತ ಶೇಕಡ 18 ರಷ್ಟು ಹೆಚ್ಚು ಪ್ರಭಾವ ಬೀರಿದ್ದ. ಆ ಘಟನೆ ಯಾರ ಗಮನಕ್ಕೂ ಬರಲೇ ಇಲ್ಲ!

ಬೇರೆ ಬೇರೆ ವೇಗಗಳಲ್ಲಿ ನಿರಂತರ ಚಲನೆಯಲ್ಲಿರುವ ಆಕಾಶ ಕಾಯಗಳು ಹತ್ತಿರಬರುವುದೂ, ದೂರ ಸರಿಯುವುದೂ ಚಲನೆಯ ಸಾಮಾನ್ಯ ನಿಯಮ. ಮಧ್ಯ ವಯಸ್ಸಿನಲ್ಲಿರುವ ಸೌರಮಂಡಲ ಶತಮಾನಗಳು ಉರುಳಿದಂತೆಲ್ಲ ಸಾವಿನತ್ತ ಸಾಗು ತ್ತಿರುವುದೂ ಸತ್ಯ. ಇದರಿಂದಾಗಿ ಸೌರಮಂಡಲದಲ್ಲಿನ ಆಕಾಶ ಕಾಯಗಳ ಚಲನೆ ಯಲ್ಲಿ ವ್ಯತ್ಯಾಸವಾಗುವುದೂ ವಿಕಸನದ ಒಂದು ಅನಿಯಂತ್ರಿತ ಘಟನೆ. ಇದು ಧಿಡೀರನೆ ಗ್ರಹಗಳ ಕೂಟದಿಂದ ಆಗುವಂತಹದಲ್ಲ. ಪ್ರಕೃತಿಯಲ್ಲಿ ಆಗಾಗ ಅಂದರೆ ಗ್ರಹಣ ಕಾಲದಲ್ಲಿ, ಗ್ರಹಗಳು ಒಂದೇ ರಾಶಿಯಲ್ಲಿ ಸುಮಾರು 5 ಡಿಗ್ರಿ ಕೋನಾಂತರದಲ್ಲಿರುವಾಗ, ಸೌರ ಗುರುತ್ವ ಕ್ಷೇತ್ರದಲ್ಲಿನ ಅಲೆಮಾರಿ ಧೂಮಕೇತು ಭೂಮಿಗೆ ಸಮೀಪವಾದಾಗ, ಅದೊಂದು ಅವರ್ಣನೀಯ ದೃಶ್ಯವಾಗುತ್ತದೆ.

ಸಾರ್ವತ್ರಿಕ ಪ್ರಭಾವ ಭೀರುವ ಈ ಘಟನೆಗಳಿಗೆ ಇಲ್ಲದ ಬಣ್ಣ ಬಳಿದು, ಗ್ರಹ ಗಳನ್ನು ತಣಿಸಲು ಯಾಗ ಯಜ್ಞಮಾಡಿ, ನದಿ ತಟಾಕಗಳ ನೀರನ್ನು ಹೊಲಸು ಮಾಡಿ, ಮಾನವನ ವೈಚಾರಿಕ ಪ್ರಜ್ಞೆಗೆ ಪರಂಪರೆಯ ಹೆಸರಿನಲ್ಲಿ ಮಂಕುಕವಿಸುವ ಮಾನವರಿಂದ ಆಗುವ ಕೆಟ್ಟ ಪರಿಣಾಮ ಒಂದೇ ಮಾರ್ಚ್ 10 ರಂದು ಸಂಭವಿಸುವ ಅನಿಷ್ಟ ಘಟನೆ. ವಿಜ್ಞಾನ, ತಂತ್ರಶಾಸ್ತ್ರಗಳ ಕೊಡುಗೆಗಳನ್ನು ವಿವೇಚನೆಯಿಲ್ಲದೆ ಬಳಸಿಕೊಂಡು(ಮಾರ್ಚ್ ವೇಳೆಗೆ ಬರಲಿದೆ ರಾಮನವಮಿಯ ಧ್ವನಿವರ್ಧಕಗಳು) ಪರಿ ಸರವನ್ನು ಮಲಿನಗೊಳಿಸುತ್ತಿರುವ ನಮ್ಮಿಂದ ಭೂಮಿಗಾಗುತ್ತಿರುವ, ಮುಂದೆ ಆಗ ಬಹುದಾದ,ಕೆಡುಕಿಗೆ ಹೋಲಿಸಿದರೆ 'ಗುರುಪ್ರಭಾವ'ಗಣನೆಗೂ ಬಾರದಷ್ಟು ಅತ್ಯಲ್ಪ.

# ಸಾವಿನೊಡನೆ ಸರಸ ಬೇಡ

- ಮದ್ಯಪಾನ ಒಂದು ಸಾಮಾಜಿಕ ಪಿಡುಗು. ಕುಡಿತದ ಚಟಕ್ಕೆ ಬಲಿಯಾಗಿ ನರಳುತ್ತಿರುವ ಕುಟುಂಬಗಳು ಸಾವಿರಾರು. ಈ ಚಟಕ್ಕೆ ತುತ್ತಾಗಿರುವವರಲ್ಲಿ ಬಡಕೂಲಿಕಾರರು ಮತ್ತು ಕಾರ್ಮಿಕ ಕುಟುಂಬಗಳೇ ಹೆಚ್ಚಾಗಿರುವುದು ದುರ್ದೈವದ ಸಂಗತಿ.

- ಕುಡಿಯುವ ಚಟ ಸಾಮಾನ್ಯವಾಗಿ ಆರಂಭವಾಗುವುದು ಮೋಜಿಗಾಗಿ. ನಂತರ ಇದೊಂದು ಅಭ್ಯಾಸವಾಗಿ ಪರಿಣಮಿಸಿ ದುರ್ವ್ಯಸನದಲ್ಲಿ ಕೊನೆಗೊಳ್ಳುತ್ತದೆ. ಇದರಿಂದಾಗುವ ದುಷ್ಪರಿಣಾಮಗಳೂ ಭಯಂಕರ. ಆರ್ಥಿಕವಾಗಿ, ಸಾಮಾಜಿಕವಾಗಿ ಈ ಕುಡಿತಕ್ಕೆ ಬಲಿಯಾದ ವ್ಯಕ್ತಿ ಹಾಗೂ ಅವನ ಕುಟುಂಬದವರು ಸಂಕಷ್ಟ ಪರಿಸ್ಥಿತಿಗೊಳಗಾಗುತ್ತಾರೆ.

- ಮದ್ಯಪಾನ ಚಟಕ್ಕೆ ಬಲಿಯಾದವರ ಮತ್ತು ಅವರ ಕುಟುಂಬಗಳ ಪರಿಸ್ಥಿತಿ ಹೀಗಿದ್ದರೆ ಕಳ್ಳಬಟ್ಟಿ ಕುಡಿಯುವವರ ಕುಟುಂಬಗಳ ಗೋಳು ಇನ್ನೂ ಶೋಚನೀಯ. ಈ ಕೀಳು ದರ್ಜೆಯ ಮದ್ಯ ಸೇವಿಸಿ ಅಪಮೃತ್ಯುಗೀಡಾಗುವ ದುರ್ಘಟನೆಗಳಿಗೂ ಆಗಿಂದಾಗ್ಗೆ ಕೇಳಿ ಬರುತ್ತವೆ. 1981ರ ಜುಲೈ 7 ರಂದು ಬೆಂಗಳೂರಿನಲ್ಲಿ ನಡೆದ ಭೀಕರ ಘಟನೆಯಂತೂ ಮೈನಡುಗಿಸುವಂಥದು. ಕಳ್ಳಬಟ್ಟಿ ಕುಡಿದು ಮೂರು ನೂರಕ್ಕೂ ಹೆಚ್ಚು ಜನರ ಸಾವು. ಕಳ್ಳಬಟ್ಟಿ ಕುಡಿದು ಸಾವಿನಂಚಿನಲ್ಲಿ ತೊಳಲಾಡುತ್ತಿದ್ದ ಜನರ ಚಿಕಿತ್ಸೆಗಾಗಿ ಸರ್ಕಾರ ವಿಶೇಷ ವ್ಯವಸ್ಥೆಯನ್ನೇ ಮಾಡಬೇಕಾಯಿತು. ಸತ್ತವರ ಕುಟುಂಬಗಳಿಗೆ ಸರಕಾರ ಒಂದು ಸಾವಿರ ರೂಪಾಯಿ ಪರಿಹಾರ ನೀಡಿತು. ಇದಲ್ಲದೆ ಭಾರತದ ಪ್ರಧಾನಿಯವರ ಫಂಡ್‌ನಿಂದ ತಲಾ ಎರಡು ಸಾವಿರ ರೂಪಾಯಿಗಳ ಪರಿಹಾರ ನೀಡಿತು.

● ಮದ್ಯಪಾನವು ಶರೀರದ ಪ್ರತಿಯೊಂದು ಅಂಗವನ್ನು ಪೀಡಿಸುತ್ತದೆ. ವಿವೇಚನೆ ಮತ್ತು ನಿರ್ಣಯ ಸಾಮರ್ಥ್ಯಗಳು ಕುಗ್ಗಿ ಅಂತಿಮವಾಗಿ ವ್ಯಕ್ತಿತ್ವವನ್ನೇ ಹಾಳುಮಾಡುತ್ತದೆ. ಕಾರ್ಯದಕ್ಷತೆಯೂ ಕುಗ್ಗುತ್ತದೆ. ಅತಿಯಾದ ಮದ್ಯಪಾನ ಸರ್ವನಾಶಕ್ಕೆ ನಾಂದಿಯಾಗುತ್ತದೆ.

## ಮದ್ಯಪಾನದಿಂದಾಗುವ ದುಷ್ಪರಿಣಾಮಗಳು

● ಬುದ್ಧಿಯ ಮತ್ತು ದೇಹದ ಶಕ್ತಿ ಹಾನಿ.

● ಹೃದಯ, ಮಿದುಳು, ಕರುಳು, ಕಣ್ಣು ಹಾಗೂ ನರಮಂಡಲ ಮುಂತಾದ ಅಂಗಗಳಿಗೆ ಗುಣಪಡಿಸಲಾಗದಷ್ಟು ಪ್ರಬಲ ಹಾನಿ.

● ಕುಡಿತದ ಅಮಲಿನಿಂದಾಗಿ ರಸ್ತೆ ಅಪಘಾತ ಹಾಗೂ ದುರಂತ ಮರಣ.

● "ಕುಡುಕ, ಹೆಂಡ ಕುಡುಕ" ಎಂಬ ಬಿರುದು. ಕುಡುಕನನ್ನು ಮಾತ್ರವಲ್ಲದೆ ಅವನ ಕುಟುಂಬದವರನ್ನೂ ಸಮಾಜ ಹೀನವಾಗಿ ಕಾಣುತ್ತದೆ.

## ಎಚ್ಚರಿಕೆ

○ ಕುಡಿತ ಒಂದು ರೋಗ. ○ ಅತಿ ಕುಡಿತ ಮಹಾರೋಗ. ○ ಈ ಚಟವನ್ನು ಬಿಡಲೇಬೇಕು. ○ ಚಟ ಬಿಡುವುದು ಕಷ್ಟವೇನಲ್ಲ. ○ ಅದಕ್ಕೂ ಮಾರ್ಗಗಳಿವೆ. ○ ಸಂಯಮದಿಂದ ಇದು ಸಾಧ್ಯ. ○ ವೈದ್ಯರೂ ನಿಮಗೆ ನೆರವಾಗುತ್ತಾರೆ. ○ ಈ ಪಿಡುಗು ನಿವಾರಣೆಗೆ ಕೇವಲ ಸರ್ಕಾರದ ಪ್ರಯತ್ನಗಳಷ್ಟೇ ಸಾಲದು. ○ ಸಮಾಜವೂ ಈ ಕಾರ್ಯದಲ್ಲಿ ಸಕ್ರಿಯ ಪಾತ್ರ ವಹಿಸಬೇಕು. ○ ನಾವೆಲ್ಲರೂ ಈ ಚಟಕ್ಕೆ ಬಲಿಯಾದ ವ್ಯಕ್ತಿಗಳನ್ನು ಹೀಯಾಳಿಸದೇ, ದುಷ್ಪರಿಣಾಮಗಳನ್ನು ಅವರಿಗೆ ತಿಳಿಯ ಹೇಳಿ ಅಂಥವರನ್ನು ಈ ಚಟದಿಂದ ದೂರ ಮಾಡಬೇಕು.

**ಪ್ರಕಟಣೆ :**

**ಕರ್ನಾಟಕ ಸರ್ಕಾರದ ವಾರ್ತಾ ಮತ್ತು ಪ್ರಚಾರ ಇಲಾಖೆ**

# 'ಅಂಕಣ' ಸ್ಥಾಯಿನಿಧಿ ಮನವಿ

ಪ್ರಿಯರೆ,

'ಆಲೋಕ' ಎಂಬ ಹೆಸರಿನಲ್ಲಿ ಆರಂಭವಾಗಿ ಈಗ 'ಅಂಕಣ'ವೆಂಬ ಹೆಸರಿನಲ್ಲಿ ಬರುತ್ತಿರುವ ಕಿರು ಪತ್ರಿಕೆಯ ಹದಿನೈದು ಸಂಚಿಕೆಗಳನ್ನು ನೀವು ಈಗಾಗಲೇ ಓದಿದ್ದೀರಿ ಅಲ್ಲವೆ? ಭಾಷೆ, ಸಾಹಿತ್ಯ ಮತ್ತು ಸಂಸ್ಕೃತಿಗೆ ಮೀಸಲಾಗಿರುವ ಬರಹಗಳಿಗೆ, ವಾಗ್ವಾದಗಳಿಗೆ ಮೀಸಲಾದ ಈ ಪತ್ರಿಕೆಯು ನಿಮಗೆ ಇಷ್ಟವಾಗಿರಬೇಕು.

ಇಂಥ ಪತ್ರಿಕೆಗಳನ್ನು ಪ್ರಕಟಿಸುವುದು ಆರ್ಥಿಕವಾಗಿ ಹೆಚ್ಚು ಹೊಣೆಗಾರಿಕೆಯನ್ನು ಬಯಸುವುದೆಂಬ ಮಾತು ಹೊಸದೇನೂ ಅಲ್ಲ. ಕೇವಲ ಚಂದಾದಾರರನ್ನು ಆಶ್ರಯಿಸಿ ಉಳಿಯುವುದು, ಬೆಳೆಯುವುದು ಕಷ್ಟದ ಮಾತು. ಇದಕ್ಕಾಗಿ ನಾವೀಗ "ಒಂದು ಯೋಜನೆ" ಯನ್ನು ರೂಪಿಸಿ ಈ ಮನವಿಯನ್ನು ಮಾಡಿಕೊಳ್ಳುತ್ತಿದ್ದೇವೆ. ಅದರ ವಿವರ ಹೀಗಿದೆ:

ಪತ್ರಿಕೆಯನ್ನು ನಡೆಸಲು ನೆರವಾಗುವ "ಸ್ಥಾಯಿನಿಧಿ" ಯೊಂದನ್ನು ರೂಪಿಸುವುದು. ಈ ಪತ್ರಿಕೆಯ ಹಿತೈಷಿಗಳು "ಒಂದುನೂರು ರೂಪಾಯಿ"ಗಳನ್ನು ನೀಡಿ ಸ್ಥಾಯಿನಿಧಿಯನ್ನು ಬೆಳೆಸುವುದು. ಅವರಿಗೆ ಪತ್ರಿಕೆಯ ಸಂಚಿಕೆಗಳನ್ನು ಉಚಿತವಾಗಿ ಕಳುಹಿಸುವ ವ್ಯವಸ್ಥೆ ಮಾಡಲಾಗುವುದು. ಒಂದು ವೇಳೆ ಅವರಿಗೆ ಈ ಪತ್ರಿಕೆ ಬೇಡವೆನಿಸಿದರೆ, ಆ ಬಗ್ಗೆ ನಮಗೆ ಎರಡು ತಿಂಗಳು ಮೊದಲು ತಿಳಿಸಿ ಆ ನೂರು ರೂಪಾಯಿಗಳನ್ನು ಹಿಂತಿರುಗಿ ಪಡೆಯಲೂಬಹುದು.

ಈ ಯೋಜನೆಗೆ ನಿಮ್ಮ ನೆರವನ್ನು ನಾವು ಬಯಸುತ್ತೇವೆ. ತಮ್ಮ ವಿಶ್ವಾಸದ ಕೊಡುಗೆಯನ್ನು ನಿರೀಕ್ಷಿಸುತ್ತೇವೆ. ತಮ್ಮಿಂದ ಉತ್ತರವನ್ನು ಬೇಗನೆ ಬಯಸಬಹುದಲ್ಲವೆ?

ಹಣವನ್ನು "ಕ್ರಾಸ್ ಮಾಡಿದ ಚೆಕ್" ಮೂಲಕ ಈ ಕೆಳಗಿನ ವಿಳಾಸಕ್ಕೆ ಕಳುಹಿಸಬಹುದು. ಚೆಕ್ ಅನ್ನು "ಅಂಕಣ"ದ ಹೆಸರಿಗೆ ಬರೆಯಿರಿ.

ವಿಳಾಸ:

'ಅಂಕಣ'
8, 'ಚಿರಂಜೀವಿ', ಹಳೇ ಈಜುಕೊಳದ ರಸ್ತೆ
ಕೋದಂಡರಾಮಪುರ
ಬೆಂಗಳೂರು-560 003

ಎಸ್.ಎಲ್.ಎನ್.

# ಹಲ್ಲುಪುಡಿ



ತುಳಸಿ, ಬೇವು ಮತ್ತು ಇತರ ಗಿಡಮೂಲಿಕೆಗಳಿಂದ ತಯಾರಿಸಲ್ಪಟ್ಟಿದೆ

ಹಲ್ಲುಗಳ ಬಿಳುಪು ಮತ್ತು ಒಸಡುಗಳನ್ನು ಬಲಪಡಿಸುತ್ತದೆ ಮತ್ತು ಆರೋಗ್ಯವನ್ನು ರಕ್ಷಿಸುತ್ತದೆ

**L. No. CS-75/78**



ಎಸ್.ಎಲ್.ಎನ್. ಟೂತ್ ಪೌಡರ್ ಕಂ.

23, ರಾಜ ಮ್ಯಾನ್‌ಷನ್, ಪ್ಯಾಲೆಸ್ ಗುಟ್ಟಹಳ್ಳಿ

ಮಲ್ಲೇಶ್ವರಂ ಮೈನ್ ರೋಡ್, ಬೆಂಗಳೂರು-560 003

No. MAG (2) PQ3 DECL 322/1979-80
ANKANA (Kannada Bi-monthly) January 1982

# ದ. ರಾ. ಬೇಂದ್ರೆ

ವರ್ಣರಂಜಿತ ಸುಂದರ ಭಾವಚಿತ್ರ

**ಎರಡು ರೂಪಾಯಿ**

[ಅಂಚೆಯ ಮೂಲಕ ತರಿಸಿಕೊಳ್ಳುವವರು 0-50 ಪೈಸೆ ಹೆಚ್ಚಿಗೆ ಕಳುಹಿಸಬೇಕು. ನೂರು ಭಾವ ಚಿತ್ರಗಳನ್ನು ಒಟ್ಟಿಗೆ ತರಿಸಿಕೊಳ್ಳುವವರಿಗೆ ಅಂಚೆ ವೆಚ್ಚ ಉಚಿತ !]

- ಜನವರಿ 31, ಬೇಂದ್ರೆಯವರ ಹುಟ್ಟಿದ ದಿನ. ಆ ದಿನದಿಂದ ಮೊದಲಾಗಿ ಒಂದು ವರ್ಷ ಕಾಲ ತಿಂಗಳಿಗೊಮ್ಮೆ ಬೇಂದ್ರೆಯವರ ಸಾಹಿತ್ಯವನ್ನು ಕುರಿತಂತೆ ಬೆಂಗಳೂರಿನ ವಿವಿಧ ಬಡಾವಣೆಗಳಲ್ಲಿ ನಡೆಸಲಾಗುತ್ತಿದೆ. ನಾಡಿನ ಹಿರಿಯ ಸಾಹಿತ್ಯ ವಿಮರ್ಶಕರು ಈ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದಾರೆ. ಅವರ ಉಪನ್ಯಾಸಗಳನ್ನು ಅನಂತರ ಮುದ್ರಿಸಿ ಪ್ರಕಟಿಸಲಾಗುವುದು.

- ಕ್ರೈಸ್ಟ್ ಕಾಲೇಜ್ ಕನ್ನಡ ಸಂಘವು ದ. ರಾ. ಬೇಂದ್ರೆಯವರ ವರ್ಣಚಿತ್ರವಿರುವ (ಕ್ಯಾಬಿನೆಟ್ ಆಕಾರ) ಕಾರ್ಡುಗಳ ಮಾರಾಟದಿಂದ ಒಂದು ಪುದುವಟ್ಟನ್ನು ರೂಪಿಸಲಿದೆ. ಈ ಪುದುವಟ್ಟಿನಿಂದ ಆಧುನಿಕ ಕನ್ನಡ ಕಾವ್ಯವನ್ನು ಕುರಿತಂತೆ ಪ್ರತಿ ವರ್ಷವೂ "ದ. ರಾ. ಬೇಂದ್ರೆ ಸ್ಮೃತಿ ಉಪನ್ಯಾಸ ಮಾಲೆ"ಯನ್ನು ನಡೆಸಿಕೊಂಡು ಹೋಗಲಾಗುವುದು.

- ಇದಲ್ಲದೆ, ಕ್ರೈಸ್ಟ್ ಕಾಲೇಜ್ ಕನ್ನಡ ಸಂಘವು ವರ್ಷಕ್ಕೊಮ್ಮೆ ನಾಡಿನ ವಿದ್ಯಾರ್ಥಿಗಳಿಗಾಗಿ ಕವನ ಸ್ಪರ್ಧೆಯನ್ನು ಏರ್ಪಡಿಸಿ, ಉತ್ತಮ ಕವನಗಳನ್ನು ಆಯ್ದು ಪ್ರಕಟಿಸಲು, ಈ ಪುದುವಟ್ಟಿನಿಂದ ನೆರವು ಪಡೆಯುತ್ತದೆ.

ಸಲಹೆ–ಸಹಾಯ–ಸಹಕಾರ : **'ಸ್ನೇಹವಲಯ'–'ಅಂಕಣ'**

ಭಾವಚಿತ್ರಗಳು ದೊರೆಯುವ ಸ್ಥಳ :

| | | |
|---|---|---|
| **ಮನೋಹರ ಗ್ರಂಥಮಾಲೆ** | **ಕನ್ನಡ ಸಂಘ** | **ಚೇತನ ಕನ್ನಡ ಸಂಘ** |
| ಸುಭಾಷ್ ರಸ್ತೆ | ★ ಕ್ರೈಸ್ಟ್ ಕಾಲೇಜ್ | ★ ಚಾಮರಾಜ ಜೋಡಿ ರಸ್ತೆ |
| ಧಾರವಾಡ-1 | ಬೆಂಗಳೂರು-29 | ಮೈಸೂರು-4 |

Published by C. Srinivasaraju, 'Chiranjeevi', Old Swimming Pool Road Kodandarampura, Bangalore-560 003, Printed at ILA Printers, 153, 4th Main, 8th Cross, Bangalore-560 018. Editor A. R. Nirupama.